# ಪ ರಿ ವಿ ಡಿ



# ಬರೆದವರ ಬಗೆಯಲ್ಲಿ

ಮಾಧ್ಯಮಿಕ ಶಾಲೆಗಳ ೧೯೫೫ರ ಹೊಸ ಅಭ್ಯಾಸ ಪತ್ರಿಕೆಗನುಸಾರವಾಗಿ ಬರೆದ **ಕನ್ನಡ ವ್ಯಾಕರಣ – ವಿವಿಧ ಸಾಹಿತ್ಯ** ಪುಸ್ತಕಗಳನ್ನು ಮೇಲ್ತರಗತಿಯ ವಿದ್ಯಾರ್ಥಿಗಳಿಗೆ ಒದಗಿಸಲು ಅತ್ಯಾನಂದವಾಗುತ್ತಿದೆ.

ಈ ಮೊದಲು, ಹಳೆಯ ಅಭ್ಯಾಸಪತ್ರಿಕೆಯಂತೆ, **ವ್ಯಾಕರಣ ವಿವಿಧ – ಸಾಹಿತ್ಯ ಮಾಲೆ** ಎಂಬ ಹೊತ್ತಗೆಗಳನ್ನು ಹುಲುಬಿಸಿದ್ದೆವು. ಅವುಗಳಿಗೆ, ಶಿಕ್ಷಕರಿಂದಲೂ ವಿದ್ಯಾರ್ಥಿಗಳಿಂದಲೂ ನಮ್ಮ ಕಲ್ಪನೆ ಮೀರಿ ಪ್ರೋತ್ಸಾಹನ ಸಿಕ್ಕಿತೆಂದು ಹೇಳಲು ಹೆಮ್ಮೆಯೆನಿಸುತ್ತಿದೆ.

ಈಗ ಅದೇ ಹೆಸರಿನಿಂದ ಬೆಳಕಿಗೆ ಬಂದಿರುವ ಹೊತ್ತಗೆಗಳಲ್ಲಿ ಹಿಂದಿನ ಹೆಚ್ಚಿನ ವಿಷಯಗಳನ್ನು ತೆಗೆದಿದ್ದೇವೆ; ಅವಶ್ಯಕ ವಿಚಾರಗಳನ್ನು ಆಧುನಿಕ ಪದ್ಧತಿಯಂತೆ ನಿರೂಪಿಸಿದ್ದೇವೆ. ನಾವು ಹೇಳುವ ವಿಷಯ, ಸಾಧ್ಯವಿದ್ದಷ್ಟು ಸುಲಭ ಮತ್ತು ಸುಗಮವಾಗುವಂತೆ, ಅತ್ಯಾಧುನಿಕ, ಶಿಕ್ಷಣ ಪದ್ಧತಿಯನ್ನು ಹೊಂದಿಕೊಳ್ಳುವಂತೆ ಯತ್ನಿಸಿದ್ದೇವೆ. ನೀವು ಓದಿ ಅನುಭವಿಸಬೇಕಾದ ಮಾತಿದು. ಜೇನುತುಪ್ಪದ ತೊಟ್ಟನ್ನು ನಾಲಗೆಯ ಮೇಲಿಟ್ಟುಕೊಂಡವರಿಗೆ, ಅದರ ಮಧುರ ರುಚಿಯನ್ನು ಹೆರವರು ಹೇಳಬೇಕಾಗುವುದೇ !

ಸ್ವತಂತ್ರ ಭಾರತದಲ್ಲಿ – ರಾಷ್ಟ್ರಭಾಷೆಯಂತೆಯೇ – ಪ್ರಾದೇಶಿಕ ಭಾಷೆಗೂ ಮನ್ನಣೆ ಬರುತ್ತಲಿದೆ. ಕನ್ನಡ ನಾಡಿಗೆ ಕನ್ನಡ ನುಡಿಯೇ ಪ್ರಾದೇಶಿಕ ಭಾಷೆ. ಇದು ಅತ್ಯಲ್ಪ ಕಾಲದಲ್ಲಿಯೇ ಮಾಧ್ಯಮಿಕ ಶಾಲೆಗಳ ಮತ್ತು ಮಹಾವಿದ್ಯಾಲಯಗಳ ಬೋಧಭಾಷೆ (ಮಾಧ್ಯಮ) ಯೂ ಆಗಬೇಕಾಗಿದೆ, ಆಗಲಿದೆ, ಆಗುತ್ತಿದೆ. ಆದುದರಿಂದ ಆ ಮೊದಲೇ ನಿಮ್ಮನ್ನು ಈ '**ಕನ್ನಡ ವ್ಯಾಕರಣ – ವಿವಿಧ ಸಾಹಿತ್ಯ**' ದ ಗರಡಿಯಲ್ಲಿ ಪಳಗಿಸಿ ನಿಮ್ಮ ಬುದ್ಧಿಯ ಸರ್ವತೋಮುಖ ಶಕ್ತಿಗಳನ್ನು ಸಂವರ್ಧಿಸುವುದೇ ನಮ್ಮ ಸದುದ್ದೇಶ.

ನಮ್ಮ ಸದುದ್ದೇಶ–ಸಾಹಸಗಳ ಸೀಮೆ ಇದಕ್ಕೂ ಹರವಾಗಿದೆ. ನುಡಿಯೇ ನಾಡಿನ ಅಡಿಗಲ್ಲು. ಭಾಷೆಯ ಬುನಾದಿ ಭದ್ರವಾಗಿದ್ದಂತೆ ನಾಡಿನ ನೆಮ್ಮದಿಯ ನೆಲೆಮಾಡು ಮುಗಿಲಿನತ್ತ ಮುನ್ನಡೆಯುವುದು. ಮಾತಿನ ಮೆರಗು ಮಾನವನ ಸಂಸ್ಕೃತಿಯನ್ನು ಅಳೆಯುವ ಅಳತೆಗೋಲು. ಭಾಷೆ ಬಲವಾಗಬೇಕು, ಭವ್ಯವಾಗಬೇಕು; ಎಂದರೆಯೇ ದೇಶ ದೊಡ್ಡಿತೆಯನ್ನು ಪಡೆಯುವುದು. ಈ ಕಾರಣದಿಂದಲೇ, ಸ್ವತಂತ್ರ ಭಾರತದ ಪ್ರತಿಯೊಂದು ಪ್ರದೇಶವೂ ತನ್ನ ಮಾತೃಭಾಷೆಯ ಮೇಲ್ಮೆಗಾಗಿ ತನ್ನದೇ ಆದ ವಿಶ್ವವಿದ್ಯಾಲಯವನ್ನು ಸ್ಥಾಪಿಸಿಕೊಳ್ಳುತ್ತಿದೆ. ಹೀಗೆಯೇ, ನಮ್ಮ ಕನ್ನಡ ನಾಡಿಗೂ 'ಕರ್ನಾಟಕ ವಿಶ್ವವಿದ್ಯಾಲಯ' ಏರ್ಪಟ್ಟಿರುವುದು ಅತ್ಯಂತ ಆನಂದದ ಸಂಗತಿ !

ಈ ವಿಶ್ವವಿದ್ಯಾಲಯವು ಕನ್ನಡದ ಉನ್ನತಿಗಾಗಿ ಮಹಾವಿದ್ಯಾಲಯಗಳಲ್ಲಿ ಕನ್ನಡ ಭಾಷಾಭ್ಯಾಸದ ರೂಪರೇಖೆಗಳನ್ನು ರೂಪಿಸುತ್ತಲಿದೆ; ರೂಪಿಸಿದೆ. ಅದಕ್ಕೆ ಹೊಂದು ಗೂಡುವಂತೆ ಮಾಧ್ಯಮಿಕ ಶಾಲೆಗಳಿಗಾಗಿ ಈ ೧೯೫೫ರ ಹೊಸ ಅಭ್ಯಾಸ ಪತ್ರಿಕೆ ಹೊರಟಿದೆ.

ಇವೆರಡನ್ನು ಸಮನ್ವಯಿಸುವಂತೆ, ಈ ವ್ಯಾಕರಣ ವಿವಿಧ-ಸಾಹಿತ್ಯ ಪುಸ್ತಕಗಳು ಪ್ರಕಟವಾಗಿವೆ. ಇವು ವಿದ್ಯಾರ್ಥಿಗಳ ಬುದ್ಧಿಗೆ ಬಲವನ್ನೂ ಜಿಜ್ಞಾಸೆಗೆ ಪ್ರಚೋದನೆಯನ್ನೂ ಕೊಡುವುದರಲ್ಲಿ ಸಂಶಯವಿಲ್ಲ.

ಈ ಪುಸ್ತಕಗಳ ರಚನಾಕಾರ್ಯದಲ್ಲಿ ನಮಗೆ ಅನೇಕ ಸೂಕ್ತ ಸಲಹೆಗಳನ್ನಿತ್ತ ಶ್ರೀ ಹುಯಿಲಗೋಳ ವರದರಾಜ M. A. B. T. ಗುರುಗಳು ಬಾ. ಮಿ. ಹೈಸ್ಕೂಲು ಧಾರವಾಡ ಇವರಿಂದಲೂ ಕೆಲವು ಜನ ವಿದ್ವನ್ಮಿತ್ರರಿಂದಲೂ ಉಪಕೃತರಾಗಿರುವೆವು. ಎಲ್ಲರಿಗೂ ಹೃತ್ಪೂರ್ವಕ ಧನ್ಯವಾದಗಳು.

ಈ ಹೊತ್ತಗೆಗಳಲ್ಲಿರಬಹುದಾದ ಕುಂದುಕೊರತೆಗಳನ್ನು ಕುರಿತು ಅನುಭವಿಕ ಶಿಕ್ಷಕರೂ ಸುಜ್ಞವಿದ್ವಾಂಸರೂ ತಾತ್ವಿಕ ಸಲಹೆ – ಸೂಚನೆಗಳನ್ನು ಕೊಡುವರೆಂದು ನಂಬಿರುವೆವು ಅವುಗಳನ್ನು ಕೃತಜ್ಞತೆಯಿಂದ ಸ್ವೀಕರಿಸಿ ಮುಂದಿನ ಮುದ್ರಣದಲ್ಲಿ ಸರಿಪಡಿಸುವೆವು.

ಧಾರವಾಡ
ದಿ. ೨೪–೯–೧೯೫೫ **ಪಂಡಿತ ಕವಲಿ**

# ಪ್ರಕಾಶಕರ ಹಾರಯಿಕೆ

ನಾವು ಈ ವರೆಗೆ ಪ್ರಾಥಮಿಕ ಶಾಲೆ— ಮಾಧ್ಯಮಿಕ ಶಾಲೆ— ಇವುಗಳ ಅಭ್ಯಾಸದ ಅನುಕೂಲತೆಗೆ ತಕ್ಕ ಕನ್ನಡ ಪಠ್ಯ ಪುಸ್ತಕಗಳನ್ನೂ ರಾಷ್ಟ್ರಭಾಷಾಭಿವೃದ್ಧಿ, ಪ್ರಸಾರಗಳಿಗೆ ಬೆಂಬಲಕೊಡುವಂತೆ ಹಿಂದೀ ಪಠ್ಯ ಪುಸ್ತಕ ಮೊದಲಾದುವನ್ನೂ ಓದುಗರ ಮನಮೆಚ್ಚುವಂತೆ ಹೊರಡಿಸುತ್ತಿರುವೆವೆಂಬುದು ಎಲ್ಲರಿಗೂ ಗೊತ್ತಿದೆ. ಅವುಗಳನ್ನು ವಿದ್ಯಾರ್ಥಿಗಳೂ ಪಾಲಕರೂ ಸಮಾಜವೂ–ಸರಕಾರವೂ ಸಹೃದಯತೆಯಿಂದ ಸ್ವಾಗತಿಸಿರುವುದನ್ನು ನಾವೂ ಮರೆತಿಲ್ಲ. ಈ ಪ್ರೋತ್ಸಾಹದಿಂದ ಪ್ರೇರಿತರಾಗಿಯೇ ೧೯೫೪ನೆಯ ಮಾಧ್ಯಮಿಕ ಶಾಲೆಗಳ ಅಭ್ಯಾಸ ಪತ್ರಿಕೆಗೆ ತಕ್ಕಂತೆ ಈ **ವ್ಯಾಕರಣ – ವಿವಿಧ ಸಾಹಿತ್ಯ** ಪುಸ್ತಕವನ್ನು ೧೦ನೆಯ ತರಗತಿಗಾಗಿ ಬೆಳಕಿಗೆ ತಂದಿದ್ದೇವೆ. ಇದರಲ್ಲಿ, ಮಹಾವಿದ್ಯಾಲಯ ( ಕಾಲೇಜು ) ದ ಕನ್ನಡದ ಅಭ್ಯಾಸಕ್ಕೆ ಪೂರ್ವಭಾವಿಯಾಗಿ ಎಲ್ಲ ವಿಷಯಗಳೂ ಬೇಕೆನಿಸುವಷ್ಟು ಬೆಡಗುಗೊಂಡಿವೆ.

ನಮ್ಮ ಈ ವರೆಗಿನ ಪ್ರಕಾಶನಗಳಿಗೆ ಸರ್ವರ ಪ್ರೇಮ–ಪ್ರೋತ್ಸಾಹಗಳು ದೊರೆತಂತೆ, ಈ **ವ್ಯಾಕರಣ– ವಿವಿಧ ಸಾಹಿತ್ಯ**ಗಳಿಗೂ ಸಿಕ್ಕುವುದೆಂದು ಹಾರಯಿಸಿದ್ದೇವೆ.

ಧಾರವಾಡ
ದಿ. ೨೪–೯–೧೯೫೫ **—ಪ್ರಕಾಶಕರು**

# ಕನ್ನಡ
# ವ್ಯಾಕರಣ - ವಿವಿಧ ಸಾಹಿತ್ಯ
## (೧೦ನೆಯ ತರಗತಿಗೆ)

## ವ್ಯಾಕರಣ ವಿಚಾರ
### ಕನ್ನಡ ಕುಲ

**ಕನ್ನಡ ಕುಲವೇ ಏಕೆ?** ಕುಲವನ್ನು ನಾಲಗೆ ಹೇಳಿತು, ಎಂದು ನಾಣ್ಣುಡಿಯಿದೆ. ಇದರ ಅರ್ಥವೇನು? ಕುಲವೆಂದರೆ, ಕಾದಾಟಕ್ಕೆ ಕಾರಣವಾದ ಕೀಳು-ಮೇಲುಗಳನ್ನು ಮುಂದೊಡ್ಡುವ ಜಾತಿಯಲ್ಲ; **ತಾಯ್ನಾಡು, ತಾಯ್ನುಡಿಗಳ ಸಂತತಿ. ಕನ್ನಡ ನಾಡಿನಲ್ಲಿರುವವರೂ ಕನ್ನಡ ನುಡಿಯನ್ನು ಆಡುವವರೂ ಎಲ್ಲರೂ ಕನ್ನಡ ಕುಲದವರೇ.** ಹೊಸತಿಲ ಒಳಗೆ ಯಾವುದೇ ಕುಲ-ಜಾತಿ ಇರಬಹುದು; ಹೊಸತಿಲ ಹೊರಗೆ ಬಂದಾಗ ಎಲ್ಲರೂ ಕನ್ನಡ ಕುಲದವರು, ಎಂದು ಕೆಲವರು ಹೇಳಬಹುದು. ಈ ಒಳಗೊಂದು ಹೊರಗೊಂದುತನ ಒಳಿತಲ್ಲ. ಮನೆಯ ಒಳಗೂ ಹೊರಗೂ ಅಷ್ಟೇ ಏಕೆ? ಪರಪ್ರಾಂತದಲ್ಲಿದ್ದಾಗಲೂ- ಕನ್ನಡ ಕುಲ ನಮ್ಮದು ಎಂದು ಹೇಳುವ ಕೆಚ್ಚು ಬೇಕು ಕನ್ನಡಿಗರಲ್ಲಿ. ವರ್ಗರಹಿತ ಸಮಾಜ (Secular State) ವನ್ನು ಕಟ್ಟಬೇಕೆನುವ ಭಾರತ ಸರಕಾರದ ನನಸಿನೊಳಗೊಂದು ಕಣಸು ಇದು. ವಿದೇಶಗಳಲ್ಲಿ ಕಾಲಿಟ್ಟಾಗ ನಾವು ಭಾರತೀಯರೇ ಆಗೋಣ. ಆ ಪೂರ್ವದಲ್ಲಿ 'ಸೂಚೀ ಕಟಾಹ ನ್ಯಾಯ'ದಂತೆ **ಕನ್ನಡ ಕುಲದ** ಕೆಚ್ಚನ್ನು ಅಳವಡಿಸಿಕೊಳ್ಳಬೇಕು **ಕನ್ನಡಿಗರು.**

**ಕನ್ನಡ ಕುಲದ ಹಿರಿಮೆ:** ಕನ್ನಡ ನಾಡು-ನುಡಿಗಳ ಹಿರಿಮೆಯೇ ಕನ್ನಡ ಕುಲದ ಹಿರಿಮೆ. ಒಂದೊಮ್ಮೆ ಕನ್ನಡ ನಾಡು **ಕಾವೇರಿಯಿಂದ ಗೋದಾವರಿಯ ವರೆಗೆ** ಹಬ್ಬಿದ್ದಿತೆಂತೆ. ದಕ್ಷಿಣ ಭಾರತದ **ಏಕಮೇವ ಸಮ್ರಾಟನೆಂದು ಪರಮೇಶ್ವರ ಪುಲಿಕೇಶಿಯ** ಹೆಸರನ್ನು ಹೇಳುತ್ತಿದೆ ಇತಿಹಾಸ. ಕನ್ನಡಿಗರು 'ಕುರಿತೋದದೆಯುಂ ಕಾವ್ಯ ಪ್ರಯೋಗ ಪರಿಣತ ಮತಿಗಳ್' ಎಂದು ಕವಿರಾಜ ನೃಪತುಂಗ ಹೇಳುತ್ತಾನೆ. ಕನ್ನಡ ನುಡಿ ಕ್ರಿಸ್ತವರ್ಷಗಣನೆಯ ಆರಂಭಕಾಲದಲ್ಲಿಯೇ ವಿದೇಶಗಳಲ್ಲಿಯೂ ಹರಿದು ಹಬ್ಬಿದ್ದಿತೆಂದು ಆಂಗ್ಲ ವಿದ್ವಾಂಸರೇ ಹೇಳುತ್ತಾರೆ. ಹರಪ್ಪಾ-ಮೊಹೆಂಜೋದಾರೋದ ದ್ರಾವಿಡ ಸಂಸ್ಕೃತಿ ಕನ್ನಡಿಗರನ್ನೇ ಹೆಚ್ಚಾಗಿ ಹೊಂದುತ್ತಿದೆಯೆಂದು ವಿದೇಶೀಯ ವಿದ್ವಾಂಸರು ಒಪ್ಪುತ್ತಾರೆ. ಇವೆಲ್ಲವೂ ಕನ್ನಡ ಕುಲದ ಹಿರಿಮೆಯ ಹೆಗ್ಗುರುತುಗಳೆಂಬುದು ಕನ್ನಡಿಗರಿಗೆಲ್ಲ ಹೆಮ್ಮೆಯ ಮಾತು

**ಕನ್ನಡದ ಕೀರ್ತಿಗಂಗೆ:** ಈ ಹೆಮ್ಮೆ ಒಣಹೆಮ್ಮೆಯಾಗಿಲ್ಲ. ಅನೇಕ ವಂಶಗಳ ರಾಜ ಮಹಾರಾಜರು ಕನ್ನಡ ನಾಡಿನ ಕೀರ್ತಿಯನ್ನು ದೇಶ–ವಿದೇಶಗಳಲ್ಲಿ ಹಬ್ಬಿಸಿದರು. ಕನ್ನಡದ ಕವಿಪುಂಗವರು – ಶರಣರು – ದಾಸರು ಕನ್ನಡ ನುಡಿಯ ಕಂಪು – ಇಂಪುಗಳನ್ನು ಎತ್ತೆತ್ತಲೂ ಬೀರಿದರು. ಕನ್ನಡ ಸಾಹಿತ್ಯ – ಸಂಗೀತ – ಶಿಲ್ಪಿಗಳೂ **ವಿಶ್ವದಲ್ಲಿ ವಿಶಿಷ್ಟ ಸ್ಥಾನವನ್ನೇ** ಪಡೆದುವು. ಒಟ್ಟಾರೆ, ಕನ್ನಡದ ಕೀರ್ತಿಗಂಗೆ ಎಂದೋ ಮೈದಾಳಿ ಎಂದೆಂದಿಗೂ ಹರಿಗಡಿಯದೆ ಹೊನಲು ಹೊನಲಾಗಿ ಹರಿದಿದ್ದಾಳೆ, ಹರಿಯುತ್ತಲಿದ್ದಾಳೆ, ಎಂಬುದಕ್ಕೆ ಐತಿಹಾಸಿಕ ಆಧಾರಗಳಿವೆ.

**ಪ್ರವಾಹದ ಪ್ರಗತಿ:** ಆದರೆ, ಮುಂದೆಯೂ ಹರಿಯುವಳು ಎಂಬ ಹೊಣೆಗಾರಿಕೆ ನಮ್ಮ ನಿಮ್ಮ ಮೇಲಿದೆ ಎಂಬುದನ್ನು ಮರೆಯಕೂಡದು. ನಾಡು–ನುಡಿಗಳ ಮೇಲ್ಮೆಗಾಗಿ ವೈಮನಸ್ಸುಗಳನ್ನು ಮೀಸಲಾಗಿರಿಸಬೇಕು; ಪ್ರವಾಹದ ಪ್ರಗತಿಗೆ ಸರ್ವಾತ್ಮನಾ ಪ್ರಯತ್ನಿಸಬೇಕು, ಈ ಜಾಡಿನಲ್ಲಿ ನೋಡಿದರೆ, ' ಕನ್ನಡ ಕುಲ ನಮ್ಮದು ' ಎಂದು ಹೇಳಿಕೊಳುವಂತೆ ಸನಾತನ **ಸಂಸ್ಕೃತಿ ಶ್ರೇಷ್ಠತೆ**ಯನ್ನು ನಮ್ಮಲ್ಲಿ ನೆಲೆಗೊಳಿಸಬೇಕು. ನಮ್ಮ ನಡೆ–ನುಡಿಗಳಲ್ಲೆಲ್ಲ ಕನ್ನಡತನ ಹಾಸು ಹೊಕ್ಕಾಗಬೇಕು. ಎಂದಾಗಲೇ ಪ್ರವಾಹ ಪ್ರಗತಿಪಥದಲ್ಲಿ ಸಾಗುವುದು.

**ಕನ್ನಡ ಕುವರರ ಕರ್ತವ್ಯ:** ಈ ಸಂಸ್ಕೃತಿ ಸಾಧನೆ **ಮಾತಿನಿಂದಲೇ** ಮೊದಲಾಗುವುದು. ' ಮಾತು ಜ್ಯೋತಿರ್ಲಿಂಗ ' ಎಂಬ ಶರಣವಾಣಿಯ ಸಾರವನ್ನು ತಿಳಿಯಬೇಕು. **ಮಾತು ಮಾನವ ಸಂಸ್ಕೃತಿಯ ಅಳತೆಗೋಲು, ಒರೆಗಲ್ಲು.** ಈ ಅಳತೆ ಬಣ್ಣಗಳಿಗೆ ಅಳವಡಬೇಕಾದುದು ಕನ್ನಡ ಕುವರರ ಕರ್ತವ್ಯ.

**ಅವಸ್ಥೆಗಳ ಅರಿವು:** ಕನ್ನಡ ನುಡಿಗಂಗೆ ನಿರರ್ಗಳವಾಹಿನಿ. ಆದರೆ ಕಾಲ ಪ್ರದೇಶಗಳಿಗೆ ತಕ್ಕಂತೆ ರೂಪಗಳು ಬೇರೆ ಬೇರೆಯಾಗಿ ತೋರುತ್ತಿವೆ. ತೋರಬೇಕಾದುದೂ ಸಹಜ. ಇಂದು ನಾವು ಕನ್ನಡ ಕುವರರ ಕರ್ತವ್ಯವನ್ನು ಕೊನೆಗಾಣಿಸಬೇಕಾದರೆ, ಆ ಆ ಅವಸ್ಥೆಗಳ ಅರಿವನ್ನು ಮಾಡಿಕೊಳ್ಳಬೇಕು.

**ಹಳಗನ್ನಡ ಪರಿಚಯ:** ಆ ಅವಸ್ಥೆಗಳ ಸೂಕ್ಷ್ಮ ಭೇದಗಳ ಚರ್ಚೆ ನಮಗೀಗ ಅವಶ್ಯವಿಲ್ಲ. ಈಗಿನಿಂದ ಒಂದು ಶತಮಾನದ ಹಿಂದಿನ ಕನ್ನಡವನ್ನು **ಹಳಗನ್ನಡ**ವೆಂದೂ ಅಂದಿನಿಂದ ಮುಂದಿನ ಕನ್ನಡವನ್ನು ಹೊಸಗನ್ನಡವೆಂದೂ ಸಾಮಾನ್ಯವಾಗಿ ಹೆಸರಿಸೋಣ. ಅಂದಿನ ಕನ್ನಡವೇ ಮಾರ್ಪಾಟಹೊಂದಿ ಮುಂದಿನ ಕನ್ನಡವಾಗಿದೆಯೆಂಬುದನ್ನು ಮರೆಯದಿರೋಣ.

**ಮಾರ್ಪಾಟಗಳ ಮನವರಿಕೆ:** ಅಂದು ಇಂದುಗಳ ಕನ್ನಡಗಳನ್ನು ಹೋಲಿಸಿ ನೋಡಿದರೆ, ಅಕ್ಷರ–ಶಬ್ದ–ವಾಕ್ಯರಚನೆ ಇವೆಲ್ಲವುಗಳಲ್ಲಿಯೂ ಬದಲಾಥುದು ಕಂಡು ಬರುತ್ತಿದೆ. ಅವುಗಳನ್ನೆಲ್ಲ ಆಳವಾಗಿ ನೋಡುವುದು ನಿಮ್ಮ ಅಳವೂ ಅಲ್ಲ. ಅವಶ್ಯಕತೆಯೂ

ಇಲ್ಲ. ಆದರೂ ಆ ಮಾರ್ಪಾಟಗಳ ಮುನ್ನರಿಕೆಯ ದೃಷ್ಟಿಯಿಂದ ಸಾಮಾನ್ಯವಾಗಿ ಹಳಗನ್ನಡ ಪರಿಚಯ ಮಾಡಿಕೊಂಡರೆ ಸಾಕು. ಆ ಮೊದಲು ಹೊಸಗನ್ನಡದ ಹೊಳವನ್ನು ಇನ್ನೂ ಆಳವಾಗಿ ತಿಳಿಯುವುದವಶ್ಯ.

— ಬಳಕೆ ಮತ್ತು ಕೇಳಿಕೆ —

೧. ಕನ್ನಡ ಕುಲವೆಂದರೇನು ? ಕುಲ ಶಬ್ದಕ್ಕೆ ಈ ವಿಶಿಷ್ಟಾರ್ಥವನ್ನೇ ಏಕೆ ಹೇಳಿದೆ ?
೨. ಕನ್ನಡ ಕುಲದ ಹಿರಿಮೆ ಕನ್ನಡಿಗರೆಲ್ಲ ಹೆಮ್ಮೆ- ಏಕೆ ? ಸ್ಪಷ್ಟಮಾಡಿರಿ.
೩. ಕನ್ನಡ ಕುಲದ ಕೀರ್ತಿಯನ್ನು ಗಂಗಾನದಿಗೆ ಏಕೆ ಹೋಲಿಸಿದೆ ?
೪. ನಮ್ಮ ನಡೆ-ನುಡಿಗಳಲ್ಲಿ ಕನ್ನಡತನ ಏಕೆ ಹಾಸು ಹೊಕ್ಕಾಗಬೇಕು ?
೫. ಮಾತಿಗೂ ಸಂಸ್ಕೃತಿಗೂ ಸಂಬಂಧವೇನು ? ಚರ್ಚಿಸಿರಿ.
೬. ಕನ್ನಡದ ಆ ಆ ಅವಸ್ಥೆಗಳ ಅರಿವನ್ನು ಏಕೆ ಮಾಡಿಕೊಳ್ಳಬೇಕು ?

# ೧. ವರ್ಣಗಳ ವ್ಯವಹಾರ

## ಮೂಲಾಕ್ಷರಗಳ ಮರ್ಮ

ಈ ವರೆಗೆ ವ್ಯಾಕರಣ ಶಾಸ್ತ್ರದ ಅಲ್ಪಸ್ವಲ್ಪ ಪರಿಚಯವಾಗಿದೆ. ಮೂಲಾಕ್ಷರ, ಅದರಲ್ಲಿಯ ಬಗೆಗಳು; ಶಬ್ದಗಳು, ಅವುಗಳ ಪ್ರಕಾರಗಳು; ವಾಕ್ಯಗಳು, ಅವುಗಳ ವಿವಿಧತೆ ಮುಂತಾಗಿ ನೀವು ತಿಳಿದಿರುವ ವಿಷಯ. ಇವುಗಳನ್ನು ಬಳಸುವ ರೀತಿ, ಸಂಸ್ಕಾರ, ಉಪಯೋಗ ಇತ್ಯಾದಿಗಳೂ ಕೆಲಮಟ್ಟಿಗೆ ಗೊತ್ತಾಗಿವೆ. ಇದೆಲ್ಲ ಅತ್ಯಲ್ಪ. ಅರಿಯಬೇಕಾದುದು ಇನ್ನೂ ಅಪಾರವಾಗಿದೆ. ಮೊದಲು ಕಲಿತುದನ್ನು ನೆನಪುಕೊಟ್ಟು, ಮತ್ತೆ ತಿಳಿಯಬೇಕಾದುದನ್ನು ಸಂಗ್ರಹವಾಗಿ ಹೇಳುವೆವು.

**ಮೂಲಾಕ್ಷರವೆಂದರೇನು ? :** ನಮ್ಮ ಮಾತು-ಬರೆಹಗಳ ಸ್ಪಷ್ಟತೆಗೆ ಬೇಕಾಗುವ ಎಲ್ಲ ಅಕ್ಷರಗಳನ್ನೂ ಸಿದ್ಧಪಡಿಸುವ ಮೂಲ ಗುರುತುಗಳು ಮೂಲಾಕ್ಷರಗಳು. ಅಕ್ಷರಗಳನ್ನೇ ವರ್ಣ, ಅಕ್ಕರ, ಲಿಪಿ ಎಂದು ಹೇಳುವದು.

**ಕನ್ನಡದಲ್ಲಿ ಮೂಲಾಕ್ಷರಗಳೆಷ್ಟು ? :** ನಾಲ್ವತ್ತೊಂಬತ್ತು.

**ಅವುಗಳಲ್ಲಿ ಎಷ್ಟು ಬಗೆ ? :** ೧೩ ಸ್ವರ, ೩೪ ವ್ಯಂಜನ, ೨ ಅಯೋಗವಾಹ ಎಂದು ಮೂರು ಬಗೆ.

**ಸ್ವರವೆಂದರೇನು ? :** ಸ್ವತಂತ್ರವಾಗಿ ಉಚ್ಚರಿಸಲಾಗುವ ವರ್ಣಗಳು ಸ್ವರಗಳು.

**ವಿಚಾರ:** ಕೇವಲ ಕನ್ನಡತನವನ್ನುಳ್ಳ ಕನ್ನಡ ನುಡಿಯಲ್ಲಿ 'ಋ' ಸ್ವರ ಬರಲಾರದು. ಅದನ್ನುಳ್ಳ ಶಬ್ದಗಳೂ ಕನ್ನಡದಲ್ಲಿ ಇಲ್ಲ. ಪೃಥ್ವಿ, ಮಾತೃ, ವಿಧಾತೃ ಮುಂತಾದ ಶಬ್ದಗಳು

ಸಂಸ್ಕೃತ. ಆದರೂ ಕನ್ನಡದಲ್ಲಿ ಬಂದಿವೆ. ಇಂತಹವುಗಳನ್ನು ಬರೆಯುವುದಕ್ಕೂ ಹೇಳುವುದಕ್ಕೂ 'ಋ' ಸ್ವರವನ್ನು ಸ್ವೀಕರಿಸಬೇಕು.

ೠ, ಌ ಸ್ವರಗಳು ಸಂಸ್ಕೃತದಲ್ಲಿಯೇ ವಿರಳ. ಕನ್ನಡದಲ್ಲಿ ಅವಶ್ಯವೇ ಇಲ್ಲ.

ಈಗ ನಾವು ಸ್ವೀಕರಿಸಿರುವ ವರ್ಣಮಾಲೆ ಸಂಸ್ಕೃತ, ಕನ್ನಡ ಭಾಷೆಗಳೆರಡಕ್ಕೂ ಸಂಬಂಧಿಸಿದುದು. ಈ ದೃಷ್ಟಿಯಿಂದಲೇ ಐ, ಔ ಗಳನ್ನು ಸ್ವೀಕರಿಸಬೇಕು. ಸಂಸ್ಕೃತದಲ್ಲಿ ಕೈತವ, ಔದಾರ್ಯ, ಐಶ್ವರ್ಯ, ಶೌರ್ಯ ಮುಂತಾದವುಗಳಲ್ಲಿ ಐ, ಔ ಗಳು ಬೇಕೇಬೇಕು. ಅಚ್ಚ ಕನ್ನಡದಲ್ಲಿ ಸೈರಣೆ, ಮುತ್ತೈದೆ, ವೈಲಿಗೆ, ಕೈದು ಮೊದಲಾದವುಗಳಲ್ಲಿ ಐ ಕಾರವಿದ್ದರೆ ಚೆನ್ನು ಎನ್ನಿಸುತ್ತಿದೆ. ಸಯ್ರಣೆ, ಸೆಯ್ರಣೆ, ಮುತ್ತಯ್ದೆ, ಮುತ್ತೆಯ್ದೆ, ಮಯ್ಲಿಗೆ, ಕಯ್ದು ಈ ರೂಪುಗಳು ಒಳಿತಾಗಿ ತೋರುವುದಿಲ್ಲ. ಇವುಗಳನ್ನು ಬಿಟ್ಟರೂ ತದ್ಭವ ಶಬ್ದಗಳಲ್ಲಿ ಐಶ್ವರ್ಯ ( ದ್ಭ ) ಐಸಿರಿ, ಆಮಂತ್ರಣ ( ದ್ಭ ) ಔತಣ ಮೊದಲಾದವುಗಳಲ್ಲಿ ಐ, ಔ ಗಳನ್ನು ಬಳಸಿಕೊಳ್ಳಲೇಬೇಕಾದೀತು. ತದ್ಭವಗಳು ಕನ್ನಡಿಗರ ಅನಿವಾರ್ಯ ಆಸ್ತಿಯೆಂಬುದನ್ನು ಮರೆಯುವಂತಿಲ್ಲ. ಐ, ಔಗಳನ್ನು ಬಳಸುವುದು ಬರೆಹದ ದೃಷ್ಟಿಯಿಂದಲೂ ಹಿಡಿತವೆನ್ನಿಸುವುದು. **ಕೈ– ಕೆಯ್– ಕಯ್–** ಈ ಉದಾಹರಣದಲ್ಲಿ ಲೇಖನ ಸೌಕರ್ಯ ಸಹಜವಾಗಿ ತಿಳಿಯುವಂತಿದೆ. ಈ ಕಾರಣಗಳಿಂದಾಗಿ, ಐ ಔಗಳನ್ನು– **ಸಂಧಿ ಸ್ವರವೆಂದಲ್ಲದಿದ್ದರೂ–** ಕನ್ನಡದಲ್ಲಿ ಕಲ್ಪಿಸಿರುವುದು ಅನುಕೂಲವೆನಿಸಿದೆ.

**ವ್ಯಂಜನವೆಂದರೇನು ? :** ಸ್ವರಗಳ ಸಹಾಯದಿಂದಲೇ ಉಚ್ಚರಿಸಲ್ಪಡುವ ವರ್ಣಗಳು ವ್ಯಂಜನಗಳು.

**ವಿಚಾರ:** ಯ್ ರ್ ಲ್ ವ್ ವ್ಯಂಜನಗಳು ಸಂಸ್ಕೃತದಲ್ಲಿ ಇ ಉ ಋ ಌ ಸ್ವರಗಳ ಬದಲಾಗಿ ಬರತಕ್ಕವು. ಇವುಗಳನ್ನು **ಅರ್ಧಸ್ವರ**ಗಳೆಂದು ಹೇಳುವುದೂ ಉಂಟು. ಆ ಸ್ವರಗಳ ಕ್ರಮದಿಂದ ನೋಡಿದರೆ 'ಯ್ ವ್ ರ್ ಲ್' ಎಂದು ವ್ಯಂಜನಗಳ ಕ್ರಮವಿರಬೇಕಾಗಿತ್ತು. ಹಾಗೇಕಿಲ್ಲವೋ ! ಕನ್ನಡದಲ್ಲಿ ಋ ಌ ಸ್ವರಗಳಿಲ್ಲ. ಆದುದರಿಂದ, ಕನ್ನಡದಲ್ಲಿ **'ಯ್ ವ್'** ಇವೆರಡೇ **ಅರ್ಧಸ್ವರ**ಗಳೆಂದು ಅರಿಯತಕ್ಕುದು.

**ವಿಶೇಷ ವಿಚಾರ:** ಎ, ಒ, ಳ ಈ ಮೂರಕ್ಷರಗಳು ಸಂಸ್ಕೃತದಲ್ಲಿ ಇಲ್ಲವೇ ಇಲ್ಲ. ಋ, ಶ್, ಷ್, ವಿಸರ್ಗ ( ಃ ) ಇವು ಅಚ್ಚ ಕನ್ನಡ ಶಬ್ದಗಳಲ್ಲಿ ಬರುವುದಿಲ್ಲ. ಆದರೆ — ಅಷ್ಟು, ಇಷ್ಟು, ಎಷ್ಟು ಈ ಮೂರು ಅಚ್ಚಗನ್ನಡ ಶಬ್ದಗಳಲ್ಲಿ ಷ ಕಾರ ತೋರುತ್ತಿದೆ. ಕಾರಣ, ಇವು ಅಚ್ಚ ಕನ್ನಡ ಶಬ್ದಗಳಾಗಿರಲಾರವು. ಅವೇ ಅರ್ಥಗಳನ್ನು ಕೊಡುವ **ಅಸು, ಈಸು, ಏಸು** ಶಬ್ದಗಳೇ ಸಹಜ ಕನ್ನಡದುವಾಗಿರಬಹುದು. ಈ ಶಬ್ದಗಳ ಪ್ರಯೋಗಗಳೂ ಸಿಕ್ಕುತ್ತಿವೆ. ವಿದ್ವಾಂಸರು ವಿಚಾರಿಸಿ ನಿರ್ಣಯಿಸತಕ್ಕ ವಿಷಯವಿದು.

ಮಹಾಪ್ರಾಣಾಕ್ಷರಗಳು ಸಂಖ್ಯೆಯಲ್ಲಿಯೂ ಅನುಕರಣ ಶಬ್ದಗಳಲ್ಲಿಯೂ ಕನ್ನಡ ಭಾಷೆಯ ಬಳಕೆಯಲ್ಲಿವೆ, ಎಂದು ಪ್ರಾಚೀನ ವ್ಯಾಕರಣಕಾರರ ಮತ. ಸಂಖ್ಯಾವಾಚಕಕ್ಕೆ

'ಸಾಸಿರ' (ಸ್ತ್ರ -ಸಹಸ್ರ) ಶಬ್ದದ ಹೊರತು ಬೇರೊಂದು ಸಂಖ್ಯಾವಾಚಕದ ಉದಾಹರಣವೇ ಇಲ್ಲ. ಝಳ ಝಳ–ಜಳ ಜಳ, ಇಂತಹ ಅನುಕರಣ ವಾಚಿಗಳಲ್ಲಿ ನಿಶ್ಚಿತ ರೂಪವಾಗಲಿ ನಿರ್ದಿಷ್ಟ ಅರ್ಥವಾಗಲಿ ಕಂಡುಬರುವದಿಲ್ಲ. ಆದುದರಿಂದ ಮಹಾಪ್ರಾಣಾಕ್ಷರಗಳು ಕನ್ನಡಕ್ಕೆ ಸಹಜವಾಗಿ ಹೊಂದಲಾರವು. ಬತ್ತ, ಭಂಗಾರ, ಥಾಲಿ ಮುಂತಾಗಿ ಕೆಲವರು ಹೇಳುವ ದುಂಟು. ಅದು ಉಚ್ಚಾರದ ದೋಷವೇ ಎನ್ನಬೇಕು. ಹಲವರಿಗೆ ಅಲ್ಪಪ್ರಾಣಾಕ್ಷರಗಳನ್ನು ಕೂಡ ಮಹಾಪ್ರಾಣವಾಗಿ ಎಚ್ಚರಿಸುವ ಚಟವೇ ಇದ್ದಿರಬಹುದು. ಅಂತಹವು ಸಾಧು ಪ್ರಯೋಗಗಳಲ್ಲ.

**ಅಕ್ಷರಗಳು ಹುಟ್ಟುವ ಸ್ಥಾನಗಳು:** ಮೂಲಾಕ್ಷರಗಳು ನಮ್ಮ ಬಾಯಲ್ಲಿ ಕಂಠ, ಬಾಯಿ, ಮೂರ್ಧ, ದಂತ, ಓಷ್ಠ, ನಾಶಿಕ ಈ ಸ್ಥಾನಗಳ ನೆರವಿನಿಂದ ಹುಟ್ಟುತ್ತಿವೆ. ಕೆಲ ಕೆಲವು ಅಕ್ಷರಗಳು ಎರಡೆರಡು ಸ್ಥಾನಗಳ ಸಹಾಯ್ಯದಿಂದ ಜನಿಸುತ್ತಿವೆ.

ಯಾವ ಯಾವ ಅಕ್ಷರಗಳು ಎಲ್ಲೆಲ್ಲಿ ಹುಟ್ಟುತ್ತಿವೆ ? ಹೇಳಿರಿ.

**ಗುಣಿತಾಕ್ಷರ:** ವ್ಯಂಜನಗಳಿಗೆ ಸ್ವರಚಿಹ್ನಗಳನ್ನು ಕೂಡಿಸಲು ಗುಣಿತಾಕ್ಷರಗಳಾಗು ವುವು. ಸ್ವರಚಿಹ್ನಗಳಾವುವು ? ಬಳ್ಳಿಯೆಂದರೇನು ?

**ಒತ್ತಕ್ಷರ:** ಒಂದೇ ಸ್ವರ ಸಹಿತವಾಗಿ ಕೂಡಿಕೊಂಡಿರುವ ಎರಡು ಅಥವಾ ಹೆಚ್ಚು ವ್ಯಂಜನಗಳನ್ನುಳ್ಳುದು ಒತ್ತಕ್ಷರ. ಒಂದು ವ್ಯಂಜನಕ್ಕೆ ಅದೇ ವ್ಯಂಜನ ಒತ್ತಾಗಿರುವುದು ದ್ವಿತ್ವಕ್ಷರ; ಬೇರೆ ವ್ಯಂಜನಗಳು ಒತ್ತಾಗಿರುವುದು ಸಂಯುಕ್ತಾಕ್ಷರ.

## —ಬಳಕೆ ಮತ್ತು ಕೇಳಿಕೆ—

೧. ಕನ್ನಡದ ಕೀರ್ತಿಗೆ ಐತಿಹಾಸಿಕ ಆಧಾರಗಳು ಇವೆ— ಈ ಮಾತಿನಲ್ಲಿಯ ಎಲ್ಲ ಬಗೆಯ ವರ್ಣಗಳ ಗುಂಪುಗಳನ್ನು ಮಾಡಿರಿ.
೨. ಅರ್ಧಸ್ವರಗಳೆಂದರೇನು ? ಯಾವುವು ?
೩. ಅಚ್ಚ ಕನ್ನಡದಲ್ಲಿ ಯಾವ ಅಕ್ಷರಗಳು ಬರುವುದಿಲ್ಲ ? ಸಂಸ್ಕೃತ ಶಬ್ದಗಳಲ್ಲಿ ಬಾರದ ಮೂಲಾಕ್ಷರಗಳು ಯಾವುವು ?
೪. ಅಷ್ಟು, ಇಷ್ಟು, ಎಷ್ಟುಗಳಲ್ಲಿಯ ಷ ಕಾರದ ಬಗೆಗೆ ನಿಮ್ಮ ಅಭಿಪ್ರಾಯವೇನು ?
೫. ಎರಡೆರಡು ಸ್ಥಾನಗಳಲ್ಲಿ ಹುಟ್ಟುವ ಅಕ್ಷರಗಳನ್ನು ಹೇಳಿರಿ.

# ೨. ಸಂಧಿಗಳು

## ಪೂರ್ವಜ್ಞಾನದ ಪುನರಾವರ್ತನ

**ಸಂಧಿಯೆಂದರೇನು ? :** ಎರಡು ಇಲ್ಲವೆ ಹೆಚ್ಚು ಅಕ್ಷರಗಳು ನಡುವೆ ಬಿಡುವಿಲ್ಲದಂತೆ ಕೂಡುವುದು ಸಂಧಿ.

**ವಿಗ್ರಹವೆಂದರೇನು ? :** ಸಂಧಿಸಿದ ಪದಗಳನ್ನು ಬಿಡಿಸುವುದು ವಿಗ್ರಹ.

**ಸಂಧಿಯನ್ನು ಮಾಡುವುದೇಕೆ ? :** ಹೇಳುವುದಕ್ಕೆ ಹಸನಾಗಬೇಕು, ಕೇಳುವುದಕ್ಕೆ ಹಿತವೆನಿಸಬೇಕು ಎಂದು ಸಂಧಿಯನ್ನು ಮಾಡುತ್ತಾರೆ.

**ಸಂಧಿಯನ್ನು ಎಲ್ಲಿ ಮಾಡಬಾರದು ? :** ಹೇಳು ಕೇಳುವುದಕ್ಕೆ ಕಷ್ಟವಾಗುವಂತಿದ್ದರೆ, ಮೊದಲಿನ ಅರ್ಥಕ್ಕೆ ಅನರ್ಥವಾಗುವಂತಿದ್ದರೆ ಸಂಧಿಯನ್ನು ಮಾಡಬಾರದು.

**ಹೇಗೆ ? :** ಅರಸರ್ + ರಕ್ಷಕರ್ = ಅರಸರ್ರಕ್ಷಕರ್. ಉಚ್ಚಾರಕ್ಕೂ ಶ್ರವಣಕ್ಕೂ ಕಷ್ಟ. ಅವನಿಗೆ ಅಷ್ಟು ಐಶ್ವರ್ಯವೇ ? ಇಲ್ಲಿ, ಅಷ್ಟು + ಐಶ್ವರ್ಯವೇ = ಅಷ್ಟೈಶ್ವರ್ಯವೇ – ಎಂದು ಸಂಧಿಯನ್ನು ಮಾಡಿದರೆ ಬೇರೆ ಅರ್ಥವೇ ಹುಟ್ಟುತ್ತಿದೆ.

**ಸಂಧಿ ಸ್ಥಳವಾವುದು ? :** ಪೂರ್ವಪದದ ಅಂತ್ಯದ ಮತ್ತು ಪರಪದದ ಮೊದಲಿನ ಅಕ್ಷರಗಳಿಗೆ ಸಂಬಂಧಿಸಿಯೇ ಸಂಧಿಯಾಗುವುದು.

**ಸಂಧಿಯನ್ನು ಎಲ್ಲಿ ಮಾಡಲೇಬೇಕು ? :** ಮನೆ ಅಲ್ಲಿ – ಮನೆಯಲ್ಲಿ. ಮನೆಯಲ್ಲಿ ಎಂಬುದು ಪದ. ಮನೆ, ಅಲ್ಲಿ ಎಂಬುವು ಪ್ರಕೃತಿ ಮತ್ತು ಪ್ರತ್ಯಯ. ಪ್ರಕೃತಿ ಪ್ರತ್ಯಯಗಳು ಕೂಡಿ ಪದವಾಗುವಾಗ ಸಂಧಿಯನ್ನು ಮಾಡಲೇಬೇಕು. ಇದು ಪದಮಧ್ಯ ಸಂಧಿ.

**ಮಲ್ಲಿಗೆ ಗಂಡೊಡಂ– ಮಲ್ಲಿಗೆಯಂ ಕಂಡೊಡಂ–** ದಪ್ಪಕ್ಷರದಲ್ಲಿದ್ದುದು ಕ್ರಿಯಾಸಮಾಸದ ಪದ. ಹೀಗೆ ಎರಡೂ ಪದಗಳು ಕೂಡಿ ಸಮಾಸವಾಗುವಾಗ ಸಂಧಿಯನ್ನು ಮಾಡಲೇಬೇಕು. ಇಲ್ಲವಾದರೆ ಸಮಾಸದ ( ಪ್ರತ್ಯಯಲೋಪದ ) ಮುಖ್ಯ ಲಕ್ಷಣವೇ ಮರೆಯಾಗುವುದು. ಇದನ್ನು ಪದಾಂತ್ಯ ಸಂಧಿ ಎನಬಹುದು (ಸಮಾಸದ ವಾಖ್ಯೆಯನ್ನು ನೆನೆಯಿರಿ.)

**ಸಂಧಿಕಾರ್ಯಗಳು ಯಾವುವು ? :** ಲೋಪ, ಆಗಮ, ಆದೇಶ, ಪ್ರಕೃತಿಭಾವ. ಲೋಪವೆಂದರೇನು ? ಆಗಮವೆಂದರೇನು ? ಆದೇಶವೆಂದರೇನು ? ಪ್ರತಿಯೊಂದಕ್ಕೂ ಎರಡೆರಡು ಉದಾಹರಣಗಳನ್ನು ಕೊಡಿರಿ; ವಿವರಿಸಿರಿ.

**ಪ್ರಕೃತಿಭಾವವೆಂದರೇನು ?:** ವಿಗ್ರಹದಲ್ಲಿಯ ಪದಗಳು ಅಥವಾ ಪ್ರಕೃತಿಗಳು ಸಂಧಿಯಾದ ಮೇಲೂ ಮೊದಲಿದ್ದ ರೂಪದಲ್ಲಿಯೇ ಇರುವುದು ಪ್ರಕೃತಿಭಾವ.

ಕನ್ನಡದಲ್ಲಿ ಪ್ರಕೃತಿಭಾವ ಸಂಧಿಯ ಪ್ರಸಂಗಗಳಾವುವು ? ಉದಾಹರಿಸಿರಿ.

ಶಬ್ದಗಳ ಜಾತಿಭೇದದಿಂದ ಎಷ್ಟು ಬಗೆಯ ಸಂಧಿಗಳು ? ಕನ್ನಡ ಸಂಧಿ, ಸಂಸ್ಕೃತ ಸಂಧಿ.

**ಕನ್ನಡ ಸಂಧಿ ಹೇಗಾಗುವುವು ?:** ಕನ್ನಡ + ಕನ್ನಡ; ಕನ್ನಡ + ಸಂಸ್ಕೃತ; ಸಂಸ್ಕೃತ + ಕನ್ನಡ— ಈ ಮೂರೂ ಬಗೆಗೂ ಉದಾಹರಣ ಕೊಡಿರಿ.

**ಸಂಸ್ಕೃತ ಸಂಧಿಯಾಗುವುದು ಹೇಗೆ ?:** ಸಂಸ್ಕೃತ + ಸಂಸ್ಕೃತ– ಉದಾಹರಿಸಿರಿ.

**ಸಂಧಿಸ್ಥಾನದ ಅಕ್ಷರಗಳಿಂದ ಸಂಧಿಗಳಲ್ಲಿ ಎಷ್ಟು ವಿಧ ?:** ಸ್ವರಸಂಧಿ, ವ್ಯಂಜನಸಂಧಿ.

**ಸ್ವರಸಂಧಿ ಹೇಗೆ ?:** ಸ್ವರ + ಸ್ವರ— ಉದಾಹರಣ ಹೇಳಿರಿ.

**ವ್ಯಂಜನಸಂಧಿ ಹೇಗೆ ?:** ವ್ಯಂಜನ + ವ್ಯಂಜನ; ಸ್ವರ + ವ್ಯಂಜನ; ವ್ಯಂಜನ + ಸ್ವರ— ಈ ಮೂರು ಬಗೆಗಳನ್ನು ಉದಾಹರಣಗಳಿಂದ ಸ್ಪಷ್ಟಮಾಡಿರಿ.

## — ಬಳಕೆ ಮತ್ತು ಕೇಳಿಕೆ —

೧. ಎಲೆವಳ್ಳಿಯೆ, ಮಹೋತ್ಸವ, ಮನದೆಣಿಕೆ, ಅರಸಬೇಡವೆಂಬು ಇವುಗಳಲ್ಲಿ ಯಾವ ಸಂಧಿಕಾರ್ಯಗಳಾಗಿವೆ ?

೨. ಚಂದ್ರಹಾಸಾಸಿ, ಮಾತಲ್ತು, ತದಾಸ್ಥಾನಮಂ, ಆಶ್ರಮಂಬೊಕ್ಕಚಿಂತೆ,– ಶಬ್ದಗಳ ಜಾತಿಭೇದದಿಂದ ಸಂಧಿಗಳನ್ನು ಆಯ್ದು ಹೇಳಿರಿ.

೩. ಬಗೆವೊಡೀಕನಸು, ಸಿರಿಗಣ್ಣ, ಬಗೆಗೊಳಲ್, ತಟಿನ್ಮಯಂ, ಮದೇಭೋತ್ಕರ— ಈ ಸಂಧಿಪದಗಳನ್ನು ವಿಗ್ರಹಿಸಿ, ಇಲ್ಲಿರುವ ಸ್ವರ-ವ್ಯಂಜನ ಸಂಧಿಗಳನ್ನು ಹೇಳಿರಿ.

೪. ಸಂಧಿಯನ್ನು ಮಾಡುವುದೇಕೆ ? ಉದಾಹರಿಸಿರಿ.

೫. ಸಂಧಿಯನ್ನು ಎಲ್ಲಿ ಮಾಡಲೇಬಾರದು ? ಮತ್ತು ಎಲ್ಲಿ ಮಾಡಲೇಬೇಕು ? ಉದಾಹರಣಗಳಿಂದ ಸಿದ್ಧಿಸಿರಿ.

೬. ಸಂಸ್ಕೃತದಲ್ಲಿ ಪ್ರಕೃತಿಭಾವ ಎಲ್ಲೆಲ್ಲಿ ಆಗುವುದು ? ಉದಾಹರಣಗಳನ್ನು ಕೊಟ್ಟು ವಿವರಿಸಿರಿ.

೭. ಸ್ವರದ ದೃಷ್ಟಿಯಿಂದ ಸಂಧಿಗಳಲ್ಲಿ ಎಷ್ಟು ಬಗೆಗಳು ? ಯಾವವು ? ಉದಾಹರಣಗಳಿಂದ ಸ್ಪಷ್ಟಮಾಡಿರಿ.

# ೩. ಕನ್ನಡ ಸ್ವರಸಂಧಿ

## ( ಸಂಧಿಗಳು ಮುಂದುವರಿದುದು )

**ಹಿನ್ನೋಟ: ಸ್ವರಲೋಪಸಂಧಿಯೆಂದರೇನು ?:** ಸ್ವರಕ್ಕೆ ಸ್ವರವಾಗಲು, ವಿಗ್ರಹ ಪದಗಳ ಅರ್ಥಕ್ಕೆ ತೊಂದರೆ ಬಾರದಿದ್ದಲ್ಲಿ, ಸ್ವರಲೋಪಸಂಧಿಯಾಗುವುದು.

ನೆನಪಿನ + ಏಟಿಗೆ = ನೆನಪಿನೇಟಿಗೆ– ಇಲ್ಲಿ ಸ್ವರಲೋಪಸಂಧಿ ಹೇಗಾಗಿದೆ ? ಇದು ಕನ್ನಡದಲ್ಲಿ ಅತಿ ಮುಖ್ಯವಾದ ಸಂಧಿ ನಿಯಮ, ಏಕೆ ?

**ಅರ್ಥಕ್ಕೆ ತೊಂದರೆಯೆಂದರೇನು ?:** ಕರು + ಇದು = **ಕರಿದು ?** (ಸ್ವ. ಲೋ. ಸಂ.) ಕರಿದು ಎಂದಾಗ ವಿಗ್ರಹ ಪದಗಳ ಅರ್ಥವೇ ಕೆಡುವುದು. ಹೇಗೆ ?

ತಂದೆ+ ಇಲ್ಲ = ತಂದಿಲ್ಲ? ( ಸ್ವ. ಲೋ. ಸಂ. ) ಇಲ್ಲಿ ವಿಗ್ರಹ ಪದಗಳ ಅರ್ಥ ಹೇಗೆ ಕೆಡುವುದೆಂಬುದನ್ನು ಹೇಳಿರಿ.

**ಅರ್ಥಕ್ಕೆ ಸಂಶಯ ಬರುವಂತಿದ್ದರೆ** ಆಗುವ ಮುಖ್ಯ ಸಂಧಿಗಳಾವವು? ಯ ಕಾರ, ವ ಕಾರ ಆಗಮ ಸಂಧಿಗಳು.

**ಯ ಕಾರಾಗಮ ಸಂಧಿ ಎಲ್ಲೆಲ್ಲಿ ಬರುವುದು?:** ಅ, ಇ, ಈ, ಎ, ಏ, ಐಕಾರ ಗಳಿಗೆ ಸ್ವರಬಂದಾಗ, ಹೇಗೆ? ಉದಾಹರಿಸಿರಿ.

**ವ ಕಾರಾಗಮ ಸಂಧಿ ಹೇಗಾಗುವುದು?:** ಉ, ಊ, ಒ, ಓ, ಔಕಾರಗಳಿಗೆ ಸ್ವರ ಪರವಾದಾಗ. ಹೇಗೆ?— ಉದಾಹರಣಗಳಿಂದ ವಿವರಿಸಿರಿ.

**ಲ ಕಾರಾಗಮ ಸಂಧಿ ಸಾಧುವೇ?:** ಅತ್ತ + ಇತ್ತ = ಅತ್ತಲ್ + ಇತ್ತ – **ಅತ್ತಲಿತ್ತ** ಹೋಗದಂತೆ; ಎತ್ತ**ಲುಂ** ಸುತ್ತ**ಲುಂ,** ಬಳಿಕ**ಲಾ** ಹರಿತನ್ನ, ಆಗಲೇ, ಇಲ್ಲಿ ಬರುವ ಲ ಕಾರ, ಅಲ್ ಎಂಬ ದಿಕ್–ಕಾಲವಾಚಕ ಪ್ರತ್ಯಯ. ಅದರಿಂದಲೇ, ಕಾರಣ ದಿಂದಲೇ–ಇತ್ಯಾದಿಗಳಲ್ಲಿ ತೋರುವ ಲ ಕಾರವೂ ಅಲ್ ಪ್ರತ್ಯಯದ ಅವಶೇಷವೇ ಆಗಿರ ಬೇಕು. ಮತ್ತು ಈ ಲಕಾರಾಗಮದ ಶಬ್ದಗಳು ಹೊಸಗನ್ನಡದಲ್ಲಿಯೇ ಹೆಚ್ಚಾಗಿ ಸಿಕ್ಕು ತ್ತಿವೆ. ಲಕಾರಾಗಮವನ್ನು ಬಿಟ್ಟು – ಆದರಿಂದೇ, ಕಾರಣದಿಂದೇ, ಅತ್ತೇ ಅತ್ತವೇ ಮುಂತಾಗಿಯೂ ಬರೆಯಬಹುದಾಗಿದೆ.

## ಯ ವ ಆಗಮ ಸಂಧಿ

**ಮುನ್ನೋಟ:** ಕಾ + ಉದು = ಕಾವುದು, ಕಾಯುವುದು; ಈ + ಉದು = ಈವುದು, ಈಯುವುದು, ಮೀ + ಉದು = ಮೀವುದು, ಮೀಯುವುದು; ಬೇ + ಉದು = ಬೇವುದು, ಬೇಯುವುದು. ನೋ + ಉದು = ನೋವುದು, ನೋಯುವುದು.

ಆ, ಈ, ಏ, ಓಕಾರಾಂತ ಧಾತುಗಳ ಮುಂದೆ ವಿಧ್ಯರ್ಥದ ಉದು ಪ್ರತ್ಯಯ ಸೇರಲು ಯಕಾರ ವಕಾರಾಗಮಗಳಾಗುವುವು.

**ದರ್ಶಕ ಆಕಾರಕ್ಕೆ:** ಆ + ಎಡರು = ಆಯೆಡರು; ಆ + ಓಟ = ಆವೂಟ. ಇಲ್ಲಿ ಯಾವ ಆಗಮಗಳಾಗಿವೆ? ಏಕೆ? ನಿಯಮವನ್ನು ಹೇಳಿರಿ.

**ದರ್ಶಕ ಈ ಕಾರಕ್ಕೆ:** ಈ + ಊರು = ಈಯೂರು, ಈವೂರು; ಈ + ಒಲುಮೆ = ಈಯೊಲುಮೆ, ಈವೊಲುಮೆ - ಇಲ್ಲಿ ಆಗಿರುವ ಸಂಧಿಕಾರ್ಯಗಳಾವುವು? ಏಕೆ? ನಿಯಮ ವನ್ನು ಸಮನ್ವಯಿಸಿರಿ.

**ಅ ಕಾರದ ಮುಂದೆ ಅವಧಾರಣೆ:** ಆತನ + ಎ = ಆತನೆಯೆ, ಆತನವೆ; ಅವರ+ ಏ = ಅವರಯೇ, ಅವರವೇ; ತನ್ನಯೆ, ತನ್ನವೆ ಮುಂ.

ಅ ಕಾರಕ್ಕೆ ಅವಧಾರಣೆಯ ಎ, ಏ ಕಾರಗಳ ಪರವಾಗಲು ಯ, ವ ಕಾರ ಆಗಮ ಗಳಾಗುವವು (ಅವಧಾರಣೆ: ನಿಶ್ಚಯ, ಸಿರ್ಧಾರ.)

**ಅನುಕರಣ, ಅವತರಣಗಳ ಮುಂದೆ:** ಸಳಸಳ + ಎಂದು = ಸಳಸಳಯೆಂದು (ಸಳಸಳ ಎಂದು) ನದಿ ಹರಿಯುತ್ತಿತ್ತು. 'ಮೆಚ್ಚಿದವರಿಗೆ ಮರಣ ಸುಖ' ವೆಂದು (ಸುಖ ಎಂದು) ಗಾದೆಯಿದೆ.

ಅನುಕರಣ, ಅವತರಣ ವಾಚಕಗಳ ಅ ಕಾರಗಳ ಮುಂದೆ, ಎನ್ನು ಧಾತು ರೂಪಗಳ ಪರವಾಗಲು ಯ ಕಾರವಾಗಲಿ, ವ ಕಾರವಾಗಲಿ ವಿಕಲ್ಪವಾಗಿ ಬರುವುದು.

**'ಋ' ಕಾರಾದೇಶ:** ಆ + ಋತು = ಆ ಋತು; ಈ + ಋಷಿ = ಈರುಷಿ; ಎಲ್ಲಾ + ಋಣ = ಎಲ್ಲಾರುಣ ಮುಂ.

ಆ, ಈ ಎಲ್ಲಾ ಶಬ್ದಗಳ ಮುಂದಿನ **'ಋ'** ಕಾರಕ್ಕೆ ರೇಫಾದೇಶವಾಗುವುದು. ಹೇಗೆ: ಆ ರುಷಭ, ಈ ರುಕ್ಷ; ಎಲ್ಲಾ ರುದ್ಧಿಗಳು.

**ಸೂಚನೆ:** ಈ ವಿಶೇಷ ಸಂಧಿ ನಿಯಮಗಳು ಕನ್ನಡ ಶಬ್ದಗಳಂತೆ ಸಂಸ್ಕೃತ ಶಬ್ದಗಳನ್ನೂ ಹಳಗನ್ನಡದ ರೂಪ ಸಿದ್ಧಿಗಳನ್ನೂ ಒಳಗೊಂಡಿವೆ.

## ಪ್ರಕೃತಿಭಾವ

**ಪ್ರಕೃತಿಭಾವವೆಂದರೇನು ? :** ಆ ಅರಸು, ಆ ಔದಾರ್ಯ, ಹೊಸ ಅಲಗು ಇಲ್ಲಿ ಪ್ರಕೃತಿಭಾವವಾಗಲು ಕಾರಣವೇನು ?

**ನಿಪಾತಗಳ ಮುಂದೆ ಪ್ರಕೃತಿಭಾವ:** ಅರೆ ಅರಳಿದ ಹೂ, ಅರಮೆ ಅರಲ್ದ ತಾವರೆ, ಹೋಹೋ ಎಂದು, ಎಂತೆಂತೊ ಆಯಿತು, ಆತನೇ ಅರಸಂ.

ಎ, ಏ, ಒ, ಓ ಕಾರಾಂತಗಳಾದ ನಿಪಾತಗಳಿಗೆ ಸ್ವರ ಪರವಾಗಲು ಪ್ರಕೃತಿ ಭಾವ ವಾಗುವುದು.

ಅರೆ ಎಡೆಯೊಳ್, ಏನೇನೋ ಓದಿದನು, ಅದೇ ಇದು, ನಿಮಗಕ್ಕೆ ಆಯುಷ್ಯ, ಹೇಳಿದನೋ ಇಲ್ಲವೋ, ಅವುದೊ ಎಂದು ಮುಂ.

### — ಬಳಕೆ ಮತ್ತು ಕೇಳಿಕೆ —

೧. ಕೆಳಗಿನ ಸಂಧಿ ಪದಗಳನ್ನು ಬಿಡಿಸಿ ಸಂಧಿಕಾರ್ಯಗಳನ್ನೂ ಹೆಸರುಗಳನ್ನೂ ಹೇಳಿರಿ.
ಈವಿವು ಗ್ರಂಥಗಳು, ಎಲೆ ಇವೇನು, ಆಯುನದರುತು, ಓವುತ್ತು ಮಿರ್ಪುವು, ಎನಗೆ ಯೊವುದು, ಅವೋದಿನಲ್ಲಿ, ಕರ್ತೃವಿಂದ, ಸ್ತ್ರೀಯಿವಳು.

೨. ಬಿಡಿಸಿದವುಗಳನ್ನು ಕೂಡಿಸಿ ಸಂಧಿಕಾರ್ಯಗಳನ್ನು ತಿಳಿಸಿರಿ.
ಸತಿ + ಇವಳು, ತನ್ನ + ಇರವು, ಗೋ + ಇಂದ, ಕಾ + ಅದೆ, ಏನು + ಎನಗೆ + ಇಂದು, ಈ + ಋಷಿ + ಅಲ್ಲವೇ, ಅಂಜನೋ + ಅಳುಕನೋ, ಆ + ಅಡವಿ+ಅರದು

೩. ಲಕಾರಾಗಮ ಸಂಧಿ ಸಾಧುವಾದುದೇ ? ಹೊಸತೊಂದು ಉದಾಹರಣವನ್ನು ಕೊಟ್ಟು ಚರ್ಚಿಸಿರಿ.

೪. ತನ್ನಎ, ತನ್ನಯೆ; ಪಳಪಳ ಎಂದು, ಪಳಪಳಯೆಂದು— ಈ ಉದಾಹರಣಗಳಿಗೆ ಅನ್ವಯಿಸುವ ನಿಯಮವನ್ನು ಹೇಳಿರಿ.

೫. ಅರ್ಥಕ್ಕೆ ತೊಂದರೆ ಬರುವಂತಿದ್ದರೆ— ಈ ಮಾತನ್ನು ಸಿದ್ಧಿಸುವಂತೆ ಎರಡು ಉದಾಹರಣಗಳನ್ನು ಕೊಡಿರಿ.

## ೪. ಕನ್ನಡ ವ್ಯಂಜನ ಸಂಧಿ

### ( ಸಂಧಿಗಳು ಮುಂದುವರಿದುದು )

**ಹಿನ್ನೋಟ: ಪರತೃತೀಯ ವರ್ಣಾದೇಶಸಂಧಿ:** ಸಮಾಸದಲ್ಲಿ ಉತ್ತರಪದದ ಮೊದಲಲ್ಲಿಯ ಕ ಚ ಟ ಪ ಕಾರಗಳಿಗೆ ಆ ಆ ವರ್ಗಗಳ ತೃತೀಯ ವರ್ಣಾದೇಶವಾಗುವುದು. ಹೇಗೆ?...............

**ವಕಾರಾದೇಶ ಸಂಧಿ:** ಸಮಾಸದಲ್ಲಿ ಉತ್ತರ ಪದದಾದಿಯ ಪ ಬ ಮ ಕಾರಗಳಿಗೆ ವ ಕಾರಾದೇಶವಾಗುವದು. ಹೇಗೆ?...............

**ಬ– ವಕಾರಾದೇಶ:** ಪ ಕಾರಕ್ಕೆ ಕೆಲವೆಡೆಗಳಲ್ಲಿ ಬ ಕಾರವೂ ಬೇರೆಡೆಗಳಲ್ಲಿ ವ ಕಾರವೂ ಆದೇಶವಾಗುವುವು. ಹೇಗೆ –– ಒಡಬಡು, ಮಾರುವೋಗಿ ಮುಂ.

**ದ್ವಿಭಾರ್ವಸಂಧಿ:** ಒಂದೇ ಹ್ರಸ್ವಸ್ವರವನ್ನುಳ್ಳ ನ ಣ ಲ ಯ ಳ ತ ಟ ಕಾರಾಂತ ಶಬ್ದಗಳಿಗೆ ಸ್ವರ ಪರವಾಗಲು ನ ಣ ಕಾರ ಮೊದಲಾದುವಕ್ಕೆ ದ್ವಿಭಾರ್ವವಾಗುವುದು· (ದ್ವಿಭಾರ್ವ: ದ್ವಿತ್ವ) ಹೇಗೆ? ಎನ್ನೊಳ್, ಕಣ್ಣಿಗೆ...... ಮುಂ.

**ಚ ಜಾ ಆದೇಶ:** ಸಮಾಸವಾಗುವ ನ ಣ (ನ್, ಣ್) ಕಾರಗಳ ಮುಂದೆ ಸಕಾರ ಬರಲು ಚ ಜ ಆದೇಶವಾಗುವುವು. ಹೇಗೆ? ಇಂಚರ, ಪೊಂಜುರಿಗೆ........ಮುಂ.

**ಣ ಕಾರಾದೇಶ:** ಸಮಾಸವಾಗುವಾಗ ಪದಾಂತ್ಯ ಣ ( ಣ್ ) ಕಾರಕ್ಕೆ ಪರವಾದ ನ ಕಾರಕ್ಕೆ ಣ ಕಾರಾದೇಶವಾಗುವುದು. ಹೇಗೆ? ನಾಣ್ಣುಡಿ, ತಣ್ಣೆಳಲ್ ಮುಂ.

**ಮುನ್ನೋಟ: ಳ ಕಾರಾದೇಶ:** ಡುಕಾರಾಂತ ಪದಕ್ಕೆ ವ್ಯಂಜನ ಪರವಾದಾಗ ಳ ಕಾರಾದೇಶವಾಗುವುದು. ಹೇಗೆ? ...............

ಕಾಡು + ಕೋಣ = ಕಾಳ್ಕೋಣ, ಎರಡು + ಕುದುರೆ = ಎರಳ್ಕುದುರೆ; ಕಾಳ್ಪುರಂ, ನೋಳ್ಪುದು, ಮಾಳ್ಪುದು ಮುಂ.

**ಅಪವಾದ ನಿಯಮಗಳು: ತೃತೀಯ ವರ್ಣಾದೇಶಕ್ಕೆ–** ಸಂಖ್ಯಾವಾಚಕಗಳಿಗೆ ಆದೇಶ ಶಬ್ದಗಳ ಮುಂದಿನ ಕ ಚ ತ ಪ ಕಾರಗಳಿಗೆ ತೃತೀಯ ವರ್ಣಾದೇಶವಿಲ್ಲ. ಮತ್ತು ಕೆಲವೆಡೆ ಪರಶಬ್ದದ ಆದಿವ್ಯಂಜನ ದ್ವಿತ್ವವಾಗುವುದು.

ಸಂ. ವಾ. ಗಳ ಆದೇಶಗಳು – ಒಂದು-ಒರ್, ಒ; ಎರಡು – ಇರ್, ಇ; ಮೂರು– ಮೂ, ಮು; ನಾಲ್ಕು – ನಾಲ್; ಅಯ್ದು – ಅಯ್, ಐ ಹೀಗೆಯೇ. ಉದಾ: ಒಂದು + ಕೂಟ = ಒರ್ಕೂಟ = ಒ + ಕ್ + ಕೂಟ = ಒಕ್ಕೂಟ; ಒಕ್ಕೆಲಸ, ಎರಡು + ತಂಡ = ಇರ್ + ತಂಡ = ಇ + ತ್ = ತಂಡ = ಇತ್ತಂಡ; ಮುಪ್ಪೊಳಲು, ಇಕ್ಕಡೆ, ನೂರ್ಕಾಳೆಗಗಳ್ ಇಪ್ಪತ್ತು, ಒರ್ತಲೆ ಮುಂ.

**ವ ಕಾರಾದೇಶಕ್ಕೆ:** ಕೆಲವು ಆದೇಶ ವ್ಯಂಜನಗಳ ಮುಂದಿನ ಪ ಬ ಮ ಕಾರಗಳಿಗೆ ವಕಾರಾದೇಶವಿಲ್ಲ; ಮತ್ತು ಪರಪದಾದಿ ವ್ಯಂಜನಗಳಿಗೆ ದ್ವಿರ್ಭಾವ ಬರುವುದು. ಹೇಗೆ?– ಕೆಳಗು + ಪೊಟ್ಟೆ = ಕಿಳ್ + ಪೊಟ್ಟೆ = ಕಿ + ಪ್ + ಪೊಟ್ಟೆ = ಕಿಪ್ಪೊಟ್ಟೆ; ಎರಡು + ಬದಿ = ಇರ್ + ಬದಿ = ಇ + ಬ್ + ಬದಿ = ಇಬ್ಬದಿ. ಮೂರು + ವಾರು = ಮು + ಮ್ + ಮಾರು= ಮುಮ್ಮಾರು.

## ಪ್ರಕೃತಿಭಾವ

**ತೃತೀಯ ವರ್ಣಕ್ಕೆ ಪ್ರಕೃತಿಭಾವ:** ಒಂದು ಕಣ್ಣ, ಎರಡು ತಲೆಯು, ಮೂರು ಪೊಳಲು ಮುಂ.

ಆದೇಶವನ್ನು ಹೊಂದದ ಸಂಖ್ಯಾವಾಚಕಗಳ ಮುಂದಿನ ಕ ತ ಪ ಕಾರಗಳಿಗೆ ಪ್ರಕೃತಿ ಭಾವವಾಗುವುದು.

**ದ್ವಿರ್ಭಾವಕ್ಕೆ ಪ್ರಕೃತಿಭಾವ:** **ಉಣದಿ**ರ್ಪಾಧನಂ, **ತಿನದೆ** ಪೋದಂ, ಚಿಗುರೆಂಮು **ಮೆಲೆ** ಬೇವು, **ದಲಿದಾ**ರ್ಯವರ್ತನಂ.

ಣ, ನ, ಲ, ಳ ಕಾರಾದಿಗಳ ಮುಂದೆ ಸ್ವರ ಬಂದಾಗಲೂ ಕೆಲವೆಡೆಗಳಲ್ಲಿ ದ್ವಿರ್ಭಾವದ ಬದಲು ಪ್ರಕೃತಿಭಾವವಾಗುವುದು.

**ಗಮಕ ಸಮಾಜದಲ್ಲಿ ಪ್ರಕೃತಿಭಾವ:** ಸಮಾಸದಲ್ಲಿ ಕೃದಂತ ವಿಶೇಷಣ ಪೂರ್ವ ಪದಗಳಿಗೆ ಪರವಾದ ವ್ಯಂಜನಗಳಿಗೆ ಪ್ರಕೃತಿಭಾವವಾಗುವುದು.

ಹೇಗೆ: ಎತ್ತುವ ಕೋಲು, ತೂಗಿದ ತೊಟ್ಟಿಲು, ಆಡುವ ಪೊಲ, ಹಿರಿವ ಬಾಳ್, ಕೆಲೆವಮಾತು, ಹರಿವ ಸುರಿಗೆ, ತೂಗುವ ಸೊಡರು ಮುಂ.

**ವಿಶೇಷ:** ಅಪವಾದ ನಿಯಮ: ಮೂಲನಿಯಮದಂತೆ ಸಿದ್ಧವಾಗಲಾರದ ಉದಾಹರಣ ಗಳನ್ನು ತೋರಿಸುವುದು ಅಪವಾದ ನಿಯಮ.

ಮೇಲೆ ಕೊಟ್ಟಿರುವ ದ್ವಿರ್ಭಾವ, ಅಪವಾದ ಮುಂತಾದ ನಿಯಮಗಳು ಹೆಚ್ಚಾಗಿ ಹಳಗನ್ನಡವನ್ನೇ ಸಂಬಂಧಿಸುತ್ತವೆ. ಹೊಸಗನ್ನಡದಲ್ಲಿ ಆ ವ್ಯಂಜನಾಂತ ರೂಪುಗಳು ಸ್ವರಾಂತವಾಗಿ ಬರುವುದುಂಟು. ಅಂತಹ ಕಡೆಗಳಲ್ಲಿ ಈ ನಿಯಮಗಳನ್ನು ಹೊಂದಿಸ ಬಾರದು.

### — ಬಳಕೆ ಮತ್ತು ಕೇಳಿಕೆ —

೧. ಕೆಳಗಿನ ಸಂಧಿಗಳನ್ನು ಬಿಡಿಸಿ ಸಂಧಿಕಾರ್ಯಗಳನ್ನು ಹೇಳಿರಿ.
ಮೆಲ್ಪಾತು, ಬೆಳ್ಜವರಿ, ಕಣ್ಣರಿಕೆ, ಎಳವಾಳೆ, ಕಲ್ಲೆಣ್ಣೆ, ನಾಣ್ನುಡಿ, ಎತ್ತುವ ಕೋಲು, ನೆಲೆವನೆ, ನಿಟ್ಟೋಟ.

೨. ವಿಗ್ರಹಗಳನ್ನು ಕೂಡಿಸಿ ಸಂಧಿಯ ಹೆಸರನ್ನು ಅಥವಾ ಕಾರ್ಯಗಳನ್ನು ಹೇಳಿರಿ.
ಒಂದು + ಗಾಲಿ, ಕಣ್ + ಕೆಡಿಸು, ಮೆಲ್ + ಪಾಸು, ಮನೆ + ಬಾಳ್ತೆ, ಒಳ್ + ಎದೆ; ಮುನ್ + ಸೂರು, ಎಳ + ತೆಂಗು, ಕಲ್ + ಮಾನಿಸ, ಬಿಣ್ + ಕೆಚ್ಚಲು, ಎರಡು + ಕಡೆ, ಮೂರು + ಪತ್ತು, ಕಳ್ + ಅದೆ.

೩. ಸಮಾಸದ ಪರಪದದ ಆದಿಯ ಪ ಕಾರಕ್ಕೆ ಯಾವ ಯಾವ ಆದೇಶಗಳಾಗುತ್ತವೆ? ಉದಾಹರಣಗಳಿಂದ ಸಿದ್ಧಿಸಿರಿ.
೪. ತೃತೀಯ ವರ್ಣಕ್ಕೆ ಪ್ರಕೃತಿಭಾವ ನಿಯಮವನ್ನು ಉದಾಹರಣಗಳಲ್ಲಿ ಅನ್ವಯಿಸಿರಿ.
೫. ಗಮಕ ಸಮಾಸದಲ್ಲಿ ಪ್ರಕೃತಿಭಾವವಾಗುವ ಎರಡು ಉದಾಹರಣಗಳನ್ನು ಕೊಡಿರಿ; ಅವು ಸಮಾಸವಿಲ್ಲದಲ್ಲಿ ಆಗುವ ರೂಪುಗಳನ್ನು ಹೇಳಿರಿ.
೬. ತಪ್ಪಿದ ಸಂಧಿಗಳನ್ನು ತಿದ್ದಿ ಕಾರಣಗಳನ್ನು ಕೊಡಿರಿ.
ಒಗ್ಗಣ್ಣಿ, ಮುನ್ನೆರಗು, ಜಾಣ್ನುಡಿ, ಬಲ್ಕಾಳೆಗ, ತೆಳ್ಬಸಿರು, ಎಣ್ಪತ್ತು, ಒದೋಳ್, ತಲೆತೂಗು.

——

## ೫. ಸಂಸ್ಕೃತ ವ್ಯಂಜನ ಸಂಧಿ
## ( ಸಂಧಿಗಳು ಮುಂದುವರಿದುದು )

**ಸೂಚನೆ:** ಸಂಸ್ಕೃತ ಸ್ವರಸಂಧಿಗಳು ನಾಲ್ಕೇ ಇವೆ. ಅವು ೯ನೆಯ ತರಗತಿಯಲ್ಲಿ ಕೊಟ್ಟಿವೆ. (ಅಲ್ಲಿಯೇ ಓದಿಕೊಳ್ಳಬೇಕು.)

**ಹಿನ್ನೋಟ: ಪೂರ್ವತೃತೀಯ ವರ್ಣಾದೇಶ ಸಂಧಿ:** ಪೂರ್ವಶಬ್ದದ ಕೊನೆಯಲ್ಲಿಯ ವರ್ಗ ಪ್ರಥಮಾಕ್ಷರಗಳಿಗೆ ಸ್ವರ ಇಲ್ಲವೆ ಮೃದುವರ್ಣ ಪರವಾದರೆ, ಆ ಪ್ರಥಮಾಕ್ಷರಗಳಿಗೆ ಆ ಆ ವರ್ಗಗಳ ತೃತೀಯ (ಮೂರನೆಯ) ವರ್ಣಗಳ ಆದೇಶವಾಗುತ್ತಿದೆ.

ಹೇಗೆ: ದಿಗಂತ, ಅಜಾದಿ, ಷಡ್ಭವನ, ಸದ್ಗುಣ, ಸುಬಂತ ಮುಂ.

**ಅನುನಾಸಿಕಾದೇಶ:** ವರ್ಗ ಪ್ರಥಮಾಕ್ಷರಗಳಿಗೆ ಅನುನಾಸಿಕಾಕ್ಷರಗಳು ಪರವಾಗಲು ವಿಕಲ್ಪವಾಗಿ ಆ ಆ ವರ್ಗಗಳ ಅನುನಾಸಿಕಾಕ್ಷರಾದೇಶವಾಗುವುದು.

ಹೇಗೆ: ವಾಗ್ಮಾಧುರ್ಯ, ವಾಙ್ಮಾಧುರ್ಯ; ಷಡ್ಮಾಸ, ಷಣ್ಮಾಸ; ಚಿದ್ಮಯ, ಚಿನ್ಮಯ; ಅಬ್ಮಯಂ, ಅಮ್ಮಯಂ.

**ಶ ಷ ಆದೇಶ:** ಸಕಾರ, ವಿಸರ್ಗಗಳಿಗೆ ಶ, ಚ, ಛ ಕಾರಗಳು ಪರವಾಗಲು ಶಕಾರಾದೇಶವೂ, ಷ, ಟ, ಠ ಕಾರಗಳು ಪರವಾಗಲು ಷ ಕಾರಾದೇಶವೂ ಆಗುವುವು.

ಹೇಗೆ: ತಪಸ್‌ಶಕ್ತಿ = ತಪಶ್ಶಕ್ತಿ; ತೇಜಸ್‌ಚರಿತ್ರ = ತೇಜಶ್ಚರಿತ್ರ; ಪಯಸ್ ಷಂಡ = ಪಯಷ್ಷಂಡ; ವಚಷ್ಟೀಕಾ ಮುಂ.

**ಜ ಡ ಲ ಆದೇಶ:** ತ ಕಾರಕ್ಕೆ ಜ ಝ ಕಾರಗಳು ಪರವಾಗಲು ಜಕಾರಾದೇಶವೂ ಡ ಲ ಕಾರಗಳ ಯೋಗವಿದ್ದಾಗ ಡ ಲ ಕಾರಗಳ ಆದೇಶವೂ ಆಗುತ್ತವೆ.

ಹೇಗೆ: ತಜ್ಜನ್ಮ, ಲಸಜ್ಝರಿ, ರಟಡ್ಡಮರು, ಹಸಲ್ಲಪನ ಮುಂ.

**ಓಕಾರಾದೇಶ:** ವಿಸರ್ಗದ ಹಿಂದೆ ಅ ಕಾರವಿದ್ದು, ಅದಕ್ಕೆ ಅ ಕಾರ ಇಲ್ಲವೆ ಮೃದು ವ್ಯಂಜನ ಪರವಾಗಲು, ವಿಸರ್ಗಕ್ಕೆ ಉ ಕಾರಾದೇಶವಾಗುವುದು. ಅದು ಹಿಂದಿನ ಅ ಕಾರದೊಡನೆ ಗುಣವಾಗಿ ಓ ಕಾರಾಗುವುದು. ಇದರ ಮುಂದಿನ ಅ ಕಾರ ಲೋಪವಾಗುವುದು.

**ಹೇಗೆ:** ತೇಜೋಭಂಗ, ವಚೋಽನುಸಾರ, ಮನೋಽನುರಾಗ, ಅಂಭೋಧಿ ಮುಂ.

**ಮುನ್ನೋಟ: ವಿಸರ್ಗಕ್ಕೆ ರೇಫಾದೇಶ:** (ಹವಿಸ್)– ಹವಿಃ + ಭಾಗ = ಹವಿರ್ ಭಾಗ; ( ಧನುಸ್ )– ಧನುಃ + ಬಾಣ = ಧನುರ್ಬಾಣ; ( ದೋಸ್ )– ದೋಃ + ದಂಡ = ದೋರ್ದಂಡ.

ಪೂರ್ವ ಪದಾಂತ್ಯದ ವಿಸರ್ಗ (ಸ್) ದ ಹಿಂದೆ ಅ ಆ ಕಾರಗಳ ಹೊರತು ಉಳಿದ ಸ್ವರಗಳಿದ್ದು, ಪರದಲ್ಲಿ ಸ್ವರ ಇಲ್ಲವೆ ಮೃದುವ್ಯಂಜನ ಪರವಾಗಲು ವಿಸರ್ಗಕ್ಕೆ ರೇಫಾದೇಶವಾಗುವುದು.

**ಹೇಗೆ:** ಚಕ್ಷುರಿಂದ್ರಿಯ, ದೋರ್ಬಲ, ಉಚ್ಚೈರ್ಜೀವನ, ದ್ವಿರ್ಭಾವ ಮುಂ.

**ಚ ಕಾರಾಗಮ:** ಪದ + ಛೇದ = ಪದ + ಚ್ + ಛೇದ = ಪದಚ್ಛೇದ. ಶ್ವೇತ + ಛತ್ರ = ಶ್ವೇತ + ಚ್ + ಛತ್ರ = ಶ್ವೇತಚ್ಛತ್ರ. ತರು + ಛಾಯಾ = ತರುಚ್ಛಾಯಾ.

ಪದಾಂತ್ಯ ಹ್ರಸ್ವಸ್ವರಕ್ಕೆ ಪರವಾದ ಛ ಕಾರದ ಹಿಂದೆ ಚಕಾರಾಗಮವಾಗುತ್ತಿದೆ.

ಹೇಗೆ: ಪರಿ + ಛೇದ = ಪರಿಚ್ಛೇದ; ಬಿಂಬಚ್ಛವಿ, ವಿಚ್ಛಿನ್ನ ಮುಂ.

## ಪ್ರಕೃತಿಭಾವ

ವರ್ಗ ಪ್ರಥಮಾಕ್ಷರಗಳಿಗೆ ಕರ್ಕಶ ವರ್ಣಗಳು ಪರವಾಗಲು ಸಾಮಾನ್ಯವಾಗಿ ಪ್ರಕೃತಿಭಾವವಾಗುವುದು.

ವಾಕ್ಪ್ರಹಾರ, ಷಟ್‌ಪದ, ಚಿತ್ಪಾವನ, ಅಪ್ತರಂಗ.

**ವಿಸರ್ಗದ ಮುಂದೆ ಪ್ರಕೃತಿಭಾವ:** ಅಂತಃಕರಣ, ಪಯಃಪಾನ, ತೇಜಃಖಂಡ, ತಪಃಫಲ.

ವಿಸರ್ಗದ ಹಿಂದೆ ಅ ಕಾರವಿದ್ದು ಅದಕ್ಕೆ ಕ ಖ ಪ ಫ ಗಳ ಯೋಗವಾದರೆ ಪ್ರಕೃತಿಭಾವವಾಗುವುದು.

ಹೇಗೆ: ರಜಃಕಣ, ಅಯಃಖಂಡ, ಯಶಃಪೂತ, ಅಂಭಃಫೇನ ಮುಂ.

ಮನಃಶಾಂತಿ, ಮನಶ್ಶಾಂತಿ; ದುಃಸಹ, ದುಸ್ಸಹ; ಚತುಃಷಷ್ಠಿ.

ವಿಸರ್ಗದ ಮುಂದೆ ಶ ಷ ಸ ಕಾರಗಳಿರಲು ವಿಕಲ್ಪವಾಗಿ ಪ್ರಕೃತಿಭಾವವಾಗುವುದು.

### — ಬಳಕೆ ಮತ್ತು ಕೇಳಿಕೆ —

೧. ಸಂಧಿಗಳನ್ನು ಬಿಡಿಸಿ ಸಂಧಿಕಾರ್ಯಗಳನ್ನು ಹೇಳಿರಿ.

ಅಧೋವದನ, ದಿಗ್ವಧು, ಸದಾಶಯ, ವಾಙ್ನಿಶ್ಚಯ, ಸಚ್ಚರಿತ್ರ, ದಂತಚ್ಛದ, ಧನುಷ್ಟಂಕಾರ, ಅಂತಃಪಟ, ಧೂರ್ಜಟಿ, ಸಚ್ಛಾತ್ರ.

೨. ಬಿಡಿಸಿದವುಗಳನ್ನು ಕೂಡಿಸಿ, ಸಂಧಿ ನಿಯಮಗಳನ್ನು ಅನ್ವಯಿಸಿರಿ.
ಉತ್ + ನತ, ತಪಃ + ಧನ, ಸತ್ + ಲೇಖನ, ಹರಿಃ + ಭವತಿ, ಮನಃ + ಶಕ್ತಿ, ಪರಿಷತ್ + ಭವನ, ಅವಿ + ಛಿನ್ನ, ತತ್ + ಪದ, ಉತ್ + ಡಯನ, ವಾಕ್ +ಮಾತ್ರ.
೩. ಪೂರ್ವಪದಾಂತ್ಯ ವಿಸರ್ಗಕ್ಕೆ ಯಾವ ಯಾವ ಸಂಧಿಕಾರ್ಯಗಳಾಗುವುವು ? ಪ್ರತಿಯೊಂದಕ್ಕೂ ಒಂದೊಂದು ಉದಾಹರಣವನ್ನು ಕೊಟ್ಟು ವಿವರಿಸಿರಿ.
೪. ಪದಾಂತ್ಯ ತ ಕಾರಕ್ಕೆ ಯಾವ ಯಾವ ಆದೇಶಗಳಾಗುವುವು ? ಉದಾಹರಣೆಗಳಿಂದ ತಿಳಿಸಿರಿ.
೫. ಯಶೋನುರಾಗ— ಈ ಶಬ್ದವನ್ನು ವಿಗ್ರಹಿಸಿ, ಹೊಂದುವ ಸೂತ್ರವನ್ನು ಹೇಳಿರಿ.
೬. ಸಂಸ್ಕೃತ ವ್ಯಂಜನ ಸಂಧಿಯಲ್ಲಿ ಪ್ರಕೃತಿಭಾವದ ಎರಡು ಉದಾಹರಣಗಳನ್ನು ತಿಳಿಸಿರಿ.

## ೬. ಶಬ್ದಗಳ ಸಮಾಲೋಚನೆ

**ಹಿನ್ನೋಟ: ಅರ್ಥ ಮತ್ತು ಶಬ್ದ ಎಂದರೇನು ?:** ಈ ಸೃಷ್ಟಿಯಲ್ಲಿ ತೋರುವ ಎಲ್ಲ ವಸ್ತುಗಳೂ ಅವುಗಳ ಗುಣ-ಕ್ರಿಯೆ ಸ್ಥಿತಿ–ಗತಿ ಇವೆಲ್ಲವೂ ಅರ್ಥಗಳು. ಇವುಗಳನ್ನು ಹೇಳುವ ಒಂದು ಅಕ್ಷರವನ್ನು ಇಲ್ಲವೆ ಅಕ್ಷರಗಳ ಗುಂಪನ್ನು ಶಬ್ದವೆನ್ನುವರು.

**ಶಬ್ದಗಳು:** ಈ ದಿನ ಶ್ರೀಕೃಷ್ಣ ಜನಿಸಿದ ಶುಭಸಮಯ. ಇಲ್ಲಿರುವ ಪ್ರತಿಯೊಂದು ಶಬ್ದದ ಅಕ್ಷರಗಳನ್ನು ಎಣಿಸಿರಿ. ಸಾಮಾನ್ಯವಾಗಿ ಒಂದರಿಂದ ಅಯ್ದು ಅಕ್ಷರಗಳ ವರೆಗೆ ಇವೆ. ಪ್ರತಿಯೊಂದರಿಂದಲೂ ಒಂದೊಂದು ಅರ್ಥ ತಿಳಿಯುವುದು. ಅರ್ಥವಿಲ್ಲದ ಅಕ್ಷರಗಳ ಗುಂಪುಗಳು ಶಬ್ದಗಳಲ್ಲ. ಕನ್ನಡದಲ್ಲಿ ಸಾಮಾನ್ಯವಾಗಿ ೧ ರಿಂದ ೩ ಅಕ್ಷರಗಳ ವರೆಗೆ ಒಂದೊಂದೇ ಶಬ್ದ ಸಿಕ್ಕುವುವು. ಹೆಚ್ಚು ಅಕ್ಷರಗಳನ್ನುಳ್ಳ ಶಬ್ದಗಳು ಬಹುಶಃ ಎರಡು ಮೂರು ಕೂಡಿರುತ್ತಿವೆ; ಇಲ್ಲವೆ ಬೇರೆ ಬೇರೆ ಪ್ರತ್ಯಯಗಳನ್ನು ಹೊಂದಿರುತ್ತಿವೆ.

**ಶಬ್ದಗಳ ಜಾತಿ:** ಜಾತಿಭೇದದಿಂದ ಶಬ್ದಗಳಲ್ಲಿ ತತ್ಸಮ–ಸಮಸಂಸ್ಕೃತ, ತದ್ಭವ, ದೇಶ್ಯ, ಅನ್ಯದೇಶ ಎಂದು ಮುಖ್ಯವಾಗಿ ನಾಲ್ಕು ಬಗೆಗಳಿವೆ.

**ತದ್ಭವವೆಂದರೇನು ?:** ಸಂಸ್ಕೃತ ಶಬ್ದಗಳು ಕನ್ನಡದ ಉಚ್ಚಾರ–ಲಿಪಿಗಳಿಗೆ ಹೊಂದುವಂತೆ ಮಾರ್ಪಾಟನ್ನು ಹೊಂದಿ ತದ್ಭವಗಳಾಗುವುವು.

### ತದ್ಭವ ವಿಚಾರ

**ಮುನ್ನೋಟ:** ಕನ್ನಡದೊಳಗೆ ಬಳಕೆಯಲ್ಲಿರುವ ಶಬ್ದಗಳಲ್ಲಿ ದೇಶ್ಯ, ತದ್ಭವ, ಅನ್ಯದೇಶ್ಯ ಎಂದು ಸಾಮಾನ್ಯವಾಗಿ ಮೂರು ಭಾಗಗಳನ್ನು ಮಾಡಬಹುದು. ಅನ್ಯದೇಶ್ಯಗಳಲ್ಲಿ ಸಂಸ್ಕೃತ, ಪ್ರಾಕೃತ ಶಬ್ದಗಳೂ ಇತ್ತೀಚೆಗಿನ ಮರಾಠಿ, ಹಿಂದೀ, ಇಂಗ್ರೇಜಿ ಶಬ್ದಗಳೂ ಬರುತ್ತಿವೆ. ಆದರೆ ಸಂಸ್ಕೃತ ಸಾಕುತಾಯಿಯಂತೆ ಕನ್ನಡವನ್ನು ಪೋಷಿಸಿರುವುದರಿಂದಲೂ

ಜಗತ್ತಿನ ಅನೇಕ ಭಾಷೆಗಳಿಗೆ ಅದು ತಾಯ್ನುಡಿಯಾಗಿರುವುದರಿಂದಲೂ ಅದಕ್ಕೊಂದು ಸ್ವತಂತ್ರ ಸ್ಥಾನವನ್ನು ಕಲ್ಪಿಸಬೇಕಾಗುತ್ತಿದೆ. ಈ ಕಾರಣದಿಂದಲೇ ಕನ್ನಡದ ಬಳಕೆಯ ಶಬ್ದಗಳಲ್ಲಿ (೧) ಸಮಸಂಸ್ಕೃತ ಅಥವಾ ತತ್ಸಮ (೨) ತದ್ಭವ (೩) ದೇಶ್ಯ (ಅಚ್ಚಕನ್ನಡ) (೪) ಅನ್ಯ ದೇಶ್ಯ ಎಂದು ನಾಲ್ಕು ವಿಭಾಗಗಳು ಹಿಂದಿನ ತರಗತಿಗಳಲ್ಲಿ ಹೇಳಿವೆ.

ಸಂಸ್ಕೃತದಲ್ಲಿಯೂ ಕನ್ನಡದಲ್ಲಿಯೂ ಏಕರೂಪದಲ್ಲಿರುವ ಶಬ್ದಗಳು. ಉದಾ: ಮಣಿ, ಮಂಚ, ತೋರಣ, ಅಟ್ಟ, ಪಟ್ಟ ಮುಂತಾದುವು. ಮಕುಟಮಣಿ-ಉಡೆಮಣಿ; ಮಣಿಮಂಚ, ಸೆಳೆಮಂಚ ಮು.

ಇವುಗಳನ್ನು 'ತತ್ಸಮ' ಗಳೆಂದು ಹೆಸರಿಸಿ, 'ಸಂಸ್ಕೃತಕ್ಕಂ ಕನ್ನಡಕ್ಕಂ ಸರಿ' ಎಂದು ಹೇಳಿದ್ದಾನೆ ಕೇಶಿರಾಜ. ಇದರಂತೆ, ಸ್ವಲ್ಪ ವ್ಯತ್ಯಾಸವಾಗಿ ಕನ್ನಡದಲ್ಲಿ ಬರುವ ಸಂಸ್ಕೃತ ಶಬ್ದಗಳನ್ನು ಸಮಸಂಸ್ಕೃತಗಳೆಂದು ಹೇಳಬಹುದು. ಉದಾ: ಪ್ರಶ್ನ – ಪ್ರಶ್ನೆ, ಕರುಣಾ – ಕರುಣ, ರಾಜನ್ – ರಾಜ, ವಿದ್ಯುತ್ – ವಿದ್ಯುತ್ತು, ದಯಾ – ದಯೆ, ಕರ್ತೃ – ಕರ್ತ ಮುಂತಾಗಿ.

ಇವುಗಳನ್ನು ಕೂಡ ತದ್ಭವದಲ್ಲಿ ಎಣಿಸಿದರೆ ತಪ್ಪಲ್ಲ.

**ತದ್ಭವವೆಂದರೇನು ? :** ಸಂಸ್ಕೃತ ಶಬ್ದಗಳು ಕನ್ನಡದಲ್ಲಿ ಹೆಚ್ಚು ಹೆಚ್ಚಾಗಿ ಬಳಕೆಯಲ್ಲಿ ಬಂದಂತೆ ಅವುಗಳನ್ನು ಸ್ವೀಕರಿಸುವುದು ಅನಿವಾರ್ಯವಾಯಿತು. ಅದರೊಡನೆಯೇ, ಕನ್ನಡತನದ ನಾಲಗೆಗೆ ಸರಿಹೋಗುವಂತೆ ಅವುಗಳನ್ನು ಉಚ್ಚಾರಣೆಯಲ್ಲಿ ಮಾರ್ಪಡಿಸಿಕೊಳ್ಳುವುದೂ; ಕನ್ನಡದ ವರ್ಣಮಾಲೆಗೆ ತಕ್ಕಂತೆ ಅವುಗಳ ಬರೆಹವನ್ನು ಬದಲಿಸಿಕೊಳ್ಳುವುದೂ ಅನಿವಾರ್ಯವೇ ಆಗಿರಬೇಕು. ಏಕೆಂದರೆ, ಕನ್ನಡದಲ್ಲಿ ಋ, ಶ, ಷ ಮೊದಲಾದ ವರ್ಣಗಳಿಲ್ಲ. ಹೀಗೆ ಕನ್ನಡತನಕ್ಕೆ ಸರಿಹೋಗುವಂತೆ ಮಾರ್ಪಾಟಾದ ಸಂಸ್ಕೃತ ಶಬ್ದಗಳನ್ನೇ ತದ್ಭವಗಳೆಂದು ಹೇಳುವರು. (ತತ್‌ಭವ-ಅದರಿಂದ ಆದುದು ಎಂದು ಅರ್ಥ.)

ಇಂತಹ ತದ್ಭವಗಳು ಹುಟ್ಟಿದ ಬಗೆಗೆ ಹಲವಾರು ನಿಯಮಗಳಿವೆ. ಅವುಗಳಲ್ಲಿ ಅತ್ಯವಶ್ಯವೆನಿಸಿದುವನ್ನು ಕೆಳಗೆ ಹೇಳುವೆವು.

೧. 'ವ್ಯಂಜನಾಂತಾತ್ ಜಸಂತವತ್ ಲುಪ್‌ಚ ತಸ್ಯ' ಎಂದರೆ, ಸಂಸ್ಕೃತ ವ್ಯಂಜನಾಂತ ಶಬ್ದಗಳ ಪ್ರಥಮಾ ಬಹುವಚನದ ರೂಪದಲ್ಲಿ ವಿಸರ್ಗವನ್ನು ಕಳೆದುಳಿಯುವ ರೂಪು ಕನ್ನಡಕ್ಕೆ ತದ್ಭವವಾಗುವುದು. ಇಂತಹ ತದ್ಭವಗಳೇ ಕನ್ನಡದಲ್ಲಿ ಹೇರಳವಾಗಿವೆ. ಉದಾ:

| **ಸಂಸ್ಕೃತಶಬ್ದ** | **ಪ್ರಥಮಾ ಬಹುವಚನ** | **ತದ್ಭವ ಶಬ್ದ** |
|---|---|---|
| ವಿದ್ವಸ್ | ವಿದ್ವಾಂಸಃ | ವಿದ್ವಾಂಸ |
| ಆಪತ್ | ಆಪದಃ | ಆಪದ |
| ಕರ್ತೃ | ಕರ್ತಾರಃ | ಕರ್ತಾರ |
| ಭಗವತ್ | ಭಗವಂತಃ | ಭಗವಂತ |

| | | |
|---|---|---|
| ಕೀರ್ತಿಮತ್ | ಕೀರ್ತಿಮಂತಃ | ಕೀರ್ತಿಮಂತ |
| ಶ್ವನ್ | ಶ್ವಾನಃ | ಶ್ವಾನ |
| ಹನೂಮತ್ | ಹನೂಮಂತಃ | ಹನೂಮಂತ |

೨. ಮಹಾಪ್ರಾಣಗಳು ಅಲ್ಪಪ್ರಾಣಗಳಾಗುತ್ತವೆ. ಉದಾ: ಮುಖ – ಮುಕ, ಮೊಗ; ಶುಂಠಿ – ಸುಂಟಿ; ಘಟಿಕಾ – ಗಡಿಗೆ, ಗಳಿಗೆ; ಧಾರಾ – ದಾರೆ; ಪರಿಖಾ – ಪರಿಕೆ; ಕಂಥಾ – ಕಂತೆ.

೩. ಶಬ್ದಗಳ ಮೊದಲಲ್ಲಿಲ್ಲದ ಕ, ಚ, ಟ, ತ ಗಳಿಗೆ ಮೂರನೆಯ ವರ್ಣದ ಆದೇಶವಾಗುವುದು. ಉದಾ: ಪ್ರಕರಣ – ಹಗರಣ; ಆಕಾಶ – ಆಗಸ; ಮಲ್ಲಿಕಾ – ಮಲ್ಲಿಗೆ; ಸೂಚೀ – ಸೂಜಿ, ಕಪಟ – ಕವಡು, ಅಟವೀ – ಅಡವಿ, ಚತುರ – ಚದುರ, ಜಾತಿ–ಜಾದಿ.

೪. ಶಬ್ದಗಳ ಆದಿಯಲ್ಲಿಯ ವಕಾರಕ್ಕೆ ಬಕಾರಾದೇಶವಾಗುವುದು. ಉದಾ: ವಚಾ–ಬಜೆ, ವಲ್ಲೀ–ಬಳ್ಳಿ, ವೀಥೀ–ಬೀದಿ, ವಸತಿ–ಬಸದಿ, ವ್ಯಾಧ–ಬಿಯದ.

೫. ಶಬ್ದಗಳ ನಡುವಣ ಬಕಾರಕ್ಕೆ ವಕಾರಾದೇಶವಾಗುವುದು. ಉದಾ: ಕಬಲ–ಕವಳ, ಶಿಬಿಕಾ–ಸಿವಿಗೆ, ಸ್ತಬಕ–ತಬಕ, ತವಕ.

೬. ಶಬ್ದಗಳ ನಡುವಿನ ಪಕಾರಕ್ಕೆ ವಕಾರಾದೇಶವಾಗುವುದು. ಉದಾ: ಕಪಿಲಾ–ಕವಿಲೆ, ತ್ರಿಪದೀ–ತಿವದಿ, ದೀಪಿಕಾ–ದೀವಿಗೆ.

೭. ಶಬ್ದಗಳ ಮೊದಲಲ್ಲಿಯ ಯಕಾರಕ್ಕೆ ಜಕಾರಾದೇಶವಾಗುತ್ತಿದೆ. ಉದಾ: ಯಂತ್ರ–ಜಂತ್ರ, ಯಾತ್ರಾ–ಜಾತ್ರೆ, ಯೋಗಿನ್–ಜೋಗಿ.

೮. ಶಬ್ದಗಳ ನಡುವಣ 'ದ್ಯ, ಯ್ಯ' ಕಾರಗಳಿಗೆ 'ಜ್ಜ' ಕಾರಾದೇಶವಾಗುವುದು. ಉದಾ: ವಿದ್ಯಾ–ಬಿಜ್ಜೆ, ವೈದ್ಯ–ಬೆಜ್ಜ, ಉದ್ಯೋಗ–ಉಜ್ಜುಗ, ಶಯ್ಯಾ–ಸೆಜ್ಜೆ.

೯. ಶ, ಷಕಾರಗಳಿಗೆ ಸಕಾರಾದೇಶವಾಗುತ್ತಿದೆ. ಉದಾ: ಶರ್ಕರಾ–ಸಕ್ಕರೆ, ಪಶು–ಹಸು, ಪಸು, ಶಾಣ–ಸಾಣೆ, ಶೇಷಾ–ಸೇಸೆ, ಜ್ಯೋತಿಷ–ಜ್ಯೋಯಿಸ, ವಿಷ–ಬಿಸ, ಸುಷಾ–ಸೊಸೆ, ವೃಷಭ–ಬಸವ ಮುಂ.

೧೦. ಋಕಾರಕ್ಕೆ ಅ, ಇ, ರಿ, ರು ಆದೇಶವಾಗುತ್ತಿದೆ. ಉದಾ: ಶೃಂಖಲಾ–ಸಂಕಲೆ, ಸಂಕೋಲೆ, ಶೃಂಗಾರ–ಸಿಂಗಾರ, ಮೃಗ–ಮಿಗ, ಋಣ–ರಿಣ, ಋಷಿ–ರಿಸಿ, ಋತು–ರುತು.

೧೧. ದ್ಯ, ಧ್ಯಗಳಿಗೆ ಜ ಆದೇಶವಾಗುವುದು. ಉದಾ: ದ್ಯೂತ–ಜೂಜು, ಸಂಧ್ಯಾ–ಸಂಜೆ, ವಂಧ್ಯಾ–ಬಂಜೆ, ಧ್ಯಾನ–ಜಾನ.

೧೨. ವಿಜಾತೀಯ ಸಂಯುಕ್ತ ವ್ಯಂಜನಗಳು ಬಿಡಿಬಿಡಿಯಾಗುವುವು. ಉದಾ: ಕ್ರಕಚ–ಕರಗಸ, ವರ್ಷ–ಬರಿಸ, ಹರ್ಷ–ಹರಿಸ, ಲಕ್ಷ್ಮೀ–ಲಕುಮಿ, ಯುಕ್ತಿ–ಜುಕುತಿ, ಚಂದ್ರ–ಚಂದಿರ, ಅರ್ಹ–ಅರುಹ.

೧೩. ವಿಜಾತೀಯ ಒತ್ತಕ್ಷರದ 'ರ' ಅಕ್ಷರಕ್ಕೆ ಲೋಪ ಬರುವುದುಂಟು. ಆಗ ಕೆಲ ವೆಡೆಗಳಲ್ಲಿ ಸಜಾತೀಯ ದ್ವಿತ್ವವಾಗುವುದು. ಉದಾ: ಪ್ರಭಾ – ಹೆಬೆ, ಶ್ರವಣ – ಸವಣ, ದ್ರೋಣೀ – ದೋಣಿ, ಕರ್ತರೀ – ಕತ್ತರಿ, ವರ್ತೀ – ಬತ್ತಿ, ಶರ್ಕರಾ – ಸಕ್ಕರೆ, ವೇತ್ರ – ಬೆತ್ತ, ವ್ಯಾಘ್ರ – ಬಗ್ಗ, ನಿದ್ರಾ – ನಿದ್ದೆ.

೧೪. ಹ್ರಸ್ವಾಕ್ಷರದ ಮುಂದಿನ ಕ್ಷ ಕಾರಕ್ಕೆ ಕ್ಕ, ಚ ಆದೇಶಗಳಾಗುವವು. ಉದಾ: ರಕ್ಷಾ – ರಕ್ಕೆ, ಅಕ್ಷ – ಅಚ್ಚು, ಅಕ್ಷರ – ಅಕ್ಕರ, ಲಕ್ಷಣ – ಲಚ್ಚಣ.

೧೫. ಕ್ಷ ವರ್ಣಕ್ಕೆ ಸ ಕಾರ ಕ ಕಾರಾದೇಶವಾಗುವವು. ಉದಾ: ಕ್ಷೇಮ – ಸೇಮೆ, ಕ್ಷಪಣ – ಸವಣ, ಪರೀಕ್ಷಾ – ಪರಕೆ, ಕ್ಷಾರ – ಕಾರ.

೧೬. ಉ ಕಾರಕ್ಕೆ ಒ ಕಾರವೂ ಇ ಕಾರಕ್ಕೆ ಎ ಕಾರವೂ ಆದೇಶವಾಗುವವು. ಉದಾ: ಪುಸ್ತಕ – ಹೊತ್ತಗೆ, ಉಷ್ಟ್ರ – ಒಂಟೆ, ಇಳಾ – ಎಳೆ, ದಿಶಾ – ದೆಸೆ.

೧೭. ದೀರ್ಘಸ್ವರಕ್ಕೆ ಹ್ರಸ್ವಾಕ್ಷರಾದೇಶವಾಗುವುದು. ಉದಾ: ಆರ್ಯ – ಅಜ್ಜ, ಮಾರ್ಜನ – ಮಜ್ಜನ, ರಾಕ್ಷಸ – ರಕ್ಕಸ, ಸೂತ್ರಿಕಾ – ಸುತ್ತಿಗೆ, ಪ್ರೇಕ್ಷಣ – ಪೆಕ್ಕಣ, ಕೂರ್ಪಾಸ – ಕುಪ್ಪಸ, ತಾಂಬೂಲ – ತಂಬುಲ, ಪ್ರಯಾಣ – ಪಯಣ, ದುಕೂಲ – ದುಗುಲ ಮುಂ.

೧೮. ಪದಮಧ್ಯದ ಅಕ್ಷರಕ್ಕೂ ಒತ್ತಕ್ಷರದಲ್ಲಿಯ ವ ಕಾರಕ್ಕೂ ಲೋಪ ಬರುವುದು. ಉದಾ: ಕುಮಾರ – ಕುವರ, ಕೋರ; ನವಮಿ – ನಾಮಿ; ನಿಯಮ - ನೇಮ; ಮಯೂರ- ಮೋರ, ಜ್ವರ – ಜರ, ತಪಸ್ವಿನ್ – ತಪಸಿ; ಸ್ವರ್ಗ – ಸಗ್ಗ.

೧೯. ಷ್ಟ, ಷ್ಠ ಕಾರಗಳಿಗೆ ಟಕಾರ ದ್ವಿತ್ವಾದೇಶವಾಗುವುದು. ಉದಾ: ಗೋಷ್ಠಿ – ಗೊಟ್ಟಿ, ಇಷ್ಟಿಕಾ – ಇಟ್ಟಿಗೆ, ನಿಷ್ಠಾ – ನಿಟ್ಟೆ.

೨೦. ಸಹ, ಮಹತ್ ಎಂಬುವುಗಳಿಗೆ ಸಾ, ಮಾ, ಆದೇಶವಾಗುವುವು. ಉದಾ: ಸಹದೇವ – ಸಾದೇವ, ಸಹವಾಸಿನ್ – ಸಾವಾಸಿ, ಮಹಾದೇವ – ಮಾದೇವ.

೨೧. ಏಕ, ದ್ವಿ, ತ್ರಿ, ಚತುಸ್ ಇವು ಸಮಸ್ತಪದವಾದಾಗ ಎಕ್ಕ, ದು, ತಿ, ಚೌ ಎಂಬ ಆದೇಶಗಳಾಗುವುವು. ಉದಾ: ಏಕಸರ – ಎಕ್ಕಸರ, ದ್ವಿಪಟ್ಟ – ದುಪಟ್ಟ, ತ್ರಿವಳಿ – ತಿವಳಿ, ಚತುರ್ದಂತ – ಚೌದಂತ.

**ಸೂಚನೆ:** ಮೇಲ್ಕಂಡ ನಿಯಮಗಳು ಅವುಗಳ ಕೆಳಗಿನ ಉದಾಹರಣಗಳಲ್ಲಷ್ಟೇ ಅನ್ವಯಿಸುವುವೆಂದು ತಿಳಿಯಕೂಡದು. ಒಂದೊಂದು ಉದಾಹರಣದಲ್ಲಿ ಬೇರೆ ಬೇರೆ ನಿಯಮಗಳೂ ಕೂಡಿಕೊಳ್ಳುವುವು. ಮತ್ತು ಇವಲ್ಲದೆ ಬೇರೆ ಸಾವಿರಾರು ತದ್ಭವಗಳಿವೆ. ಅವುಗಳನ್ನು ಅಭ್ಯಾಸದಿಂದಲೇ ತಿಳಿದುಕೊಳ್ಳಬೇಕು.

ಕೆಲವು ತದ್ಭವಗಳು ನೇರವಾಗಿ ಸಂಸ್ಕೃತದಿಂದ ಬಾರದೆ, ಪ್ರಾಕೃತದಿಂದಲೂ ಬಂದಂತೆ ತೋರುತ್ತಿವೆ. ಉದಾ:

| ಸಂಸ್ಕೃತ | ಪ್ರಾಕೃತ | ತದ್ಭವ | ಸಂಸ್ಕೃತ | ಪ್ರಾಕೃತ | ತದ್ಭವ |
|---|---|---|---|---|---|
| ವೃತ್ತ | ವಟ್ಟಂ | ಬಟ್ಟೆ | ತ್ವರಿತ | ತುರಿಅ | ತುರಿಹ |
| ಸಿಂಹ | ಸಿಂಘೋ | ಸಿಂಗ | ಶ್ರದ್ಧಾ | ಸಡ್ಡಾ | ಸಡ್ಡೆ |
| ಆಜ್ಞಾ | ಆಣಾ | ಆಣೆ | ಯಜ್ಞ | ಜಣ್ಣೋ | ಜನ್ನ |
| ನೂಪುರ | ಣೇವುರ | ನೇವುರ | ಸ್ತ್ರೀ | ಇತ್ಥೀ | ಇತ್ತಿ–ಇತಿ |

ಕೆಲವು ಪ್ರಾಕೃತ ಶಬ್ದಗಳು ಇದ್ದಕ್ಕಿದ್ದಂತೆ ತದ್ಭವವಾಗಿವೆ; ಕನ್ನಡದಲ್ಲಿ ಬಳಕೆಯೊಳಗೆ ಬಂದಿವೆ. ಜೈನ ಕಾವ್ಯಗಳು ಪ್ರಾಕೃತ ಭಾಷೆಯಲ್ಲಿರುವುದೂ ಆ ಜೈನ ಸಾಹಿತ್ಯಿಗಳೇ ಕನ್ನಡದಲ್ಲಿ ಆರಂಭಕ್ಕೆ ಸಾಹಿತ್ಯ ಸೇವೆಯನ್ನು ಕೈಕೊಂಡುದೂ ಪ್ರಾಕೃತ ತದ್ಭವಗಳ ಏಕರೂಪತೆಗೆ ಕಾರಣವಾಗಿರಬಹುದು.

| ಸಂಸ್ಕೃತ | ಪ್ರಾಕೃತ | ತದ್ಭವ |
|---|---|---|
| ಪ್ರತಿ | ಪಡಿ | ಪಡಿ |
| ವಕ್ರ | ವಂಕ | ವಂಕ |
| ಕಾರ್ಯ | ಕಜ್ಜ | ಕಜ್ಜ |
| ಸ್ನೇಹ | ನೇಹ | ನೇಹ |
| ಅಂಗಾರ | ಇಂಗಾಲ | ಇಂಗಾಲ |

**ವಿಚಾರ:** ಈಗ ನಾವು ತದ್ಭವವೆಂದು ತಿಳಿದುಕೊಂಡಿರುವ ಶಬ್ದಗಳೆಲ್ಲವೂ ನಿಜವಾಗಿ ತದ್ಭವಗಳಾಗಿರಲಾರವು. ಏಕೆಂದರೆ, ಸಂಸ್ಕೃತಭಾಷೆಯ ಸಂಪರ್ಕವಾಗುವ ಮುನ್ನ ದ್ರಾವಿಡರು– ಕನ್ನಡಿಗರು– ಉಚ್ಚಸಂಸ್ಕೃತಿಯಲ್ಲಿದ್ದರೆಂದು ಇತಿಹಾಸ ಒಪ್ಪುತ್ತಿದೆ. ಎಂದಮೇಲೆ, ಈಗ ನಾವು ತದ್ಭವವೆಂದು ತಿಳಿದುಕೊಂಡ ಶಬ್ದಗಳಾಗಲಿ, ಇದಕ್ಕೆ ಸಮಾನಾರ್ಥವಾದ ದೇಶ್ಯ ಶಬ್ದಗಳಾಗಲಿ ಅವರ ದಿನಬಳಕೆಯಲ್ಲಿ ಇದ್ದಿರಲೇಬೇಕು. ಅಂತಹ ದೇಶ್ಯ ಶಬ್ದಗಳು ಸಿಕ್ಕದಿದ್ದರೆ, ಈ ತದ್ಭವವೆಂದು ತಿಳಿದಿರುವುದೇ ದೇಶ್ಯವಾಗುವುವು. ಮುಂದೆ ಬುದ್ಧಿಪ್ರಧಾನರೂ ಸಂಸ್ಕೃತ ಭಾಷಾಪ್ರೇಮಿಗಳೂ ಈ ತತ್ಸಮ-ತದ್ಭವ ಸಂಬಂಧವನ್ನು ರೂಪಸಾಮ್ಯದಿಂದ ಕಲ್ಪಿಸಿರಲೂ ಬಹುದು. ಆದರೂ ಆ ಕಟ್ಟುನಿಟ್ಟು ಮುಂದೆ ಉಳಿದೇ ಇಲ್ಲ. ಒಟ್ಟಾರೆ, ತತ್ತ್ವದ ತಿಳಿವಳಿಕೆಯಾಗಲೆಂದು ಮೇಲೆ ಬರೆದ ನಿಯಮಗಳನ್ನು ತಿಳಿಯಲು ಅಡ್ಡಿಯಿಲ್ಲ.

## — ಬಳಕೆ ಮತ್ತು ಕೇಳಿಕೆ —

೧. ಕೆಳಗಿನ ತತ್ಸಮ ತದ್ಭವಗಳನ್ನು ಹೇಳಿರಿ. ಪಾವಡ, ಇಂಗಾಲ, ವಿದ್ಯಾಧರ, ಮಹಾಸಾಮಂತ, ಸಸಿ, ಸೇಸೆ, ಬ್ರಹ್ಮ, ಕುಂಬಳ, ಕ್ರಮುಕ, ಪಳಿಹತ್ತ, ಶಿಲಾ, ಕರಂಡಕ, ಕಾಂಡಪಟ, ದಮ್ಮಾಣಿ, ಮಂಜಿಷ್ಟಕ, ಬಲ್ಲಹ, ಪದ್ಧತಿ, ಅಲಸಿಗೆ, ಅವಸೆ, ತಿಗುಣ ಮುಂ.

೨. ಮಣಿ, ಮಂಚ, ಮಲ್ಲ, ಪಟ್ಟ ಮೊದಲಾದುವು ಸಂಸ್ಕೃತಕ್ಕೂ ಕನ್ನಡಕ್ಕೂ ಸಮಾನವೆಂದು ತೋರಿಸಿರಿ.

೩. ಆಜ್ಞಾ, ಪಡಿ, ಕಜ್ಜ ಇವು ಪ್ರಾಕೃತದಿಂದ ಕನ್ನಡಕ್ಕೆ ಹೇಗೆ ಬಂದುವೆಂದು ತೋರಿಸಿರಿ.
೪. ವ್ಯಂಜನಾಂತಾತ್ ಜಸಂತವತ್ ಲುಪ್ ಚ ತಸ್ಯ— ಎಂಬ ಸೂತ್ರವನ್ನು ವಿವರಿಸಿ ಉದಾಹರಣಗಳನ್ನು ಕೊಡಿರಿ.
೫. ತದ್ಭವಗಳ ಸತ್ಯಾಸತ್ಯತೆಯ ಬಗೆಗೆ ನಿಮ್ಮ ಅಭಿಪ್ರಾಯವೇನು?

## ೭. ಸಾಧಿತ ಪ್ರಕೃತಿಗಳು

### (ಶಬ್ದಗಳ ಸಮಾಲೋಚನೆ ಮುಂದುವರಿದುದು)

**ಹಿನ್ನೋಟ: ಸಿದ್ಧ ಸಾಧಿತ:** ರೂಪಭೇದದಿಂದ ಶಬ್ದಗಳಲ್ಲಿ ಸಿದ್ಧ ಮತ್ತು ಸಾಧಿತ ಎಂದು ಎರಡು ಬಗೆಯಿದೆ.

**ಸಿದ್ಧ ಶಬ್ದ:** ಊರು, ಗಿಳಿ, ಎಮ್ಮೆ, ಮೊರಡಿ— ಇವು ಒಂದೊಂದೇ ಶಬ್ದವಾಗಿವೆ. ಇವುಗಳಿಂದ ಒಂದೊಂದೇ ಅರ್ಥ ತಿಳಿಯುತ್ತಿದೆ. ಈ ಶಬ್ದಾರ್ಥಗಳ ಸಂಬಂಧ ಹೀಗೆಯೇ ಏಕೆ? ಎಂಬುದಕ್ಕೆ ಸಾಮಾನ್ಯವಾಗಿ ಉತ್ತರವಿಲ್ಲ. ಬಹುದಿವಸಗಳ ಬಳಕೆಯೇ-ರೂಢಿಯೇ—ಇದಕ್ಕೆ ಉತ್ತರ. ಇಂತಹ ಶಬ್ದಗಳು ಸಿದ್ಧ ಶಬ್ದಗಳು.

**ಸಾಧಿತ ಶಬ್ದ:** ಕುದಿಸು, ನೋಟಕ, ಕಳವಳಿಸು, ಬೇನಿಗ, ಕರಿಗಾಲ, ಮೇಲ್ಮನೆ ಈ ಶಬ್ದಗಳಲ್ಲಿ – ಶಬ್ದ ಮತ್ತು ಪ್ರತ್ಯಯ ಇಲ್ಲವೆ ಎರಡೆರಡು ಶಬ್ದಗಳು ಕೂಡಿ ಅರ್ಥವನ್ನು ಹೇಳುತ್ತಿವೆ. ಇವು ಹೀಗೇಕೆ ಎಂಬುದನ್ನು ಹೇಳಬಲ್ಲಿರಿ. ವ್ಯವಹಾರದ ಅನುಕೂಲತೆಗಾಗಿ ಮಾಡಿಕೊಂಡ **ಸಾಧಿತ** ಶಬ್ದಗಳಿವು. ಇಂತಹ ಶಬ್ದಗಳೇ ಬಳಕೆಯಲ್ಲಿ ಹೆಚ್ಚಾಗಿವೆ.

**ಸಾಧಿತ ಶಬ್ದಗಳಲ್ಲಿ ಬಗೆಗಳು:** ಕೃದಂತ, ತದ್ಧಿತಾಂತ, ಸಮಸ್ತ (ಸಮಾಸ) ಎಂದು ಮೂರು ಬಗೆಯ ಸಾಧಿತ ಶಬ್ದಗಳು.

**ಕೃತ್ಪ್ರತ್ಯಯವೆಂದರೇನು? :** ಮೂಲ ಶಬ್ದಗಳನ್ನು ಹುಟ್ಟಿಸುವುದಕ್ಕೆ ಧಾತುಗಳ ಮುಂದೆ ಸೇರುವ ಪ್ರತ್ಯಯಗಳು ಕೃತ್ಪ್ರತ್ಯಯಗಳು.

**ಕೃದಂತವೆಂದರೇನು?:** ಧಾತುಗಳ ಮುಂದೆ ಕೃತ್ಪ್ರತ್ಯಯ ಸೇರಲು ಕೃದಂತಗಳಾಗುವುವು. ಇವು ಕೃದಂತ ಧಾತು, ಕೃದಂತ ನಾಮ ಅಥವಾ ಕೃನ್ನಾಮ, ಕೃದಂತಾವ್ಯಯ ಎಂದು ಮುಖ್ಯವಾಗಿ ಮೂರು ಬಗೆಯಾಗಿವೆ. ಈಗ ಶಬ್ದ ವ್ಯುತ್ಪತ್ತಿಯ (Derivotion) ದೃಷ್ಟಿಯಿಂದ ಕೃದಂತಗಳ ವಿಚಾರ ಮಾಡುವಾ.

### ಕೃದಂತ ಧಾತು ಮತ್ತು ನಾಮ

**ಮುನ್ನೋಟ: ಕೃದಂತಧಾತುಗಳೆಂದರೇನು? :** ಧಾತುಗಳ ಮುಂದೆ ಇಸು, ಸು, ಚು, ಪು, ಹು, ವು ಸೇರಿದರೆ ಕೃದಂತ ಧಾತುಗಳು ಹುಟ್ಟುವುವು. ಇವುಗಳ ಮುಂದೆ, ಸಿದ್ಧ ಧಾತುಗಳಂತೆ, ಆಖ್ಯಾತ ಪ್ರತ್ಯಯಗಳು ಸೇರುವುವು.

ಕೃದಂತ ಪ್ರತ್ಯಯಗಳು ಸೇರಿದಾಗ, ಧಾತುಗಳಿಗೆ ಮೊದಲಿದ್ದ ಅರ್ಥವು ಕ್ವಚಿತ್ತಾಗಿ ಕಾಣುವುದು. ಆದರೆ ಅರ್ಥದಲ್ಲಿ ಬದಲಾಗುವ ಪ್ರಸಂಗಗಳೇ ಬಹಳ. ಹೇಗೆ: ........

(ಅ) ಅಕರ್ಮಕ ಧಾತುಗಳಿಗೆ ಕೃತ್ಪ್ರತ್ಯಯಗಳು ಸೇರಲು **ಸಕರ್ಮಕ**ಧಾತುಗಳಾಗುವುವು. ಉದಾ: ನಗು + ಇಸು = ನಗಿಸು; ಕುದಿ + ಚು = ಕುಚ್ಚು; ಮಡಿ + ಪು = ಮಡಿಪು (ಕೊಲ್ಲು); ಕೆಡೆಹು, ನೆಗವು ಮುಂ.

(ಆ) ಸಕರ್ಮಕ ಧಾತುಗಳಿಗೆ ಕೃತ್ಪ್ರತ್ಯಯಗಳು ಸೇರಲು **ಪ್ರೇರಣಾರ್ಥಕ** ಧಾತುಗಳು ಹುಟ್ಟುವವು. ಪ್ರೇರಣೆಯೆಂದರೆ, ಒಬ್ಬನು ಮತ್ತೊಬ್ಬನನ್ನು ಕೆಲಸದಲ್ಲಿ ತೊಡಗಿಸುವುದು. ಇಂತಹ ಧಾತುಗಳನ್ನು **ಪ್ರಯೋಜಕ** ಧಾತುಗಳೆಂದೂ ಹೇಳುವರು.

ಪ್ರೇರಣಾರ್ಥಕ ಅಥವಾ ಪ್ರಯೋಜಕ ಧಾತುವಿನ ಪ್ರಯೋಗವಿದ್ದಲ್ಲಿ ಕೆಲಸದಲ್ಲಿ ತೊಡಗಿಸುವವನಿಗೆ **ಪ್ರಯೋಜಕ** ಅಥವಾ **ಪ್ರೇರಕ ಕರ್ತೃ**ವೆಂದೂ ಕೆಲಸದಲ್ಲಿ ತೊಡಗುವವನಿಗೆ **ಪ್ರೇರ್ಯ** ಅಥವಾ **ಪ್ರಯೋಜಕ** ಕರ್ತೃವೆಂದೂ ಹೆಸರು.

ಉದಾ: ಗೋವಳ ಹಸುವನ್ನು ಹಕ್ಕೆಯನ್ನು ಹೊಗಿಸುತ್ತಾನೆ. ಹಕ್ಕೆಯನ್ನು ಹೊಗುವ ಕೆಲಸದಲ್ಲಿ 'ಗೋವಳ' ಪ್ರೇರಕ ಕರ್ತೃ, 'ಹಸು' ಪ್ರೇರ್ಯ ಕರ್ತೃ; ಈ ಪ್ರೇರಕ–ಪ್ರೇರ್ಯ ಸಂಬಂಧದಿಂದ 'ಹೊಗಿಸು' ಪ್ರೇರಣಾರ್ಥಕ ಧಾತು.

ಹೀಗೆಯೇ– ಪೆಂಡಾರಿ ಕುದುರೆಗೆ ಕಡಲೆಯನ್ನು ತಿನ್ನಿಸುತ್ತಾನೆ. ಒಡೆಯ ಆಳಿನಿಂದ ಬೀಜಗಳನ್ನು ಬಿತ್ತಿಸುತ್ತಾನೆ ಮುಂತಾದುವು.

(ಇ) ಪ್ರೇರಣಾರ್ಥಕ ಧಾತುಗಳ ಮುಂದೆ ಮತ್ತೆಯೂ ಪ್ರೇರಣೆಯನ್ನು ಹೇಳುವ ಸಂದರ್ಭದಲ್ಲಿ 'ಇಸು' ಪ್ರತ್ಯಯ ಸೇರುತ್ತಿದೆ. ಆಗ ಮೊದಲಿನ 'ಇಸು' ಲೋಪವಾಗುವುದು.

ಉದಾ: ರಾಮಚಂದ್ರ ಸುಗ್ರೀವನಿಂದ ಹನುಮಂತನ ಮುಖಾಂತರ ವಾನರ ಸೇನೆಗೆ ಸೇತುವೆಯನ್ನು ಕಟ್ಟಲು ಅಪ್ಪಣೆ ಮಾಡಿಸಿ (ಸಿ ............)

ಎಚ್ಚರಿಕೆ– ಬಳಕೆಯಲ್ಲಿ ಎರಡು 'ಇಸು' ಗಳನ್ನು ಇಟ್ಟು ಮಾತನಾಡುವ ರೂಢಿಯಿದೆ. ಮಾತಾಡಿಸಿಸಿದರು, ಕಳಿಸಿಸುತ್ತಾರೆ ಮುಂ. ಇದು ಸರಿಯಾದ ಪ್ರಯೋಗವಲ್ಲ.

**ನೆನಪು:** ಧಾತುಗಳ ಮುಂದೆ ಅರ್ಥಗಳನ್ನು ಬದಲುಮಾಡುವ ಪ್ರಸಂಗಗಳಲ್ಲಿಯೇ ಕೃದಂತ ಧಾತುಗಳನ್ನು ಮಾಡುತ್ತಾರೆಂದು ತಿಳಿಯಕೂಡದು.

(ಈ) ಎಷ್ಟೋ ಧಾತುಗಳಿಗೆ ಮೂಲಾರ್ಥದಲ್ಲಿಯೇ ಇಸು ಮುಂತಾಗಿ ಪ್ರತ್ಯಯಗಳು ಸೇರುವವು. ಉದಾ: ನನಗೆ ಊರು ಕಾಣುತ್ತಿದೆ, ಕಾಣಿಸುತ್ತಿದೆ; ಆ ಹಾಡು ಕೇಳುತ್ತಿದೆ, ಕೇಳಿಸುತ್ತಿದೆ. ನೆಗಳ್, ನೆಗಳ್ಚು ಮುಂ.

(ಉ) ಸನ್ಮಾನಾರ್ಥ ಕ್ರಿಯಾಪದವಿದ್ದಲ್ಲಿ 'ಇಸು' ಪ್ರತ್ಯಯಕ್ಕೆ ನಿಜವಾದ ಪ್ರೇರಣಾರ್ಥವಿರುವುದಿಲ್ಲ. ಉದಾ: ಪ್ರಭುಗಳು ದಯಮಾಡಿಸಬೇಕು. ಆಳುವ ಮಹಾಸ್ವಾಮಿಗಳು ಅಪ್ಪಣೆ ಕೊಡಿಸುವುದೇನೆಂದರೆ............ ಮುಂ.

**ಕೃದಂತನಾಮಗಳು:** ಕರ್ತೃ ಕರ್ಮಾರ್ಥಗಳಲ್ಲಿ ಧಾತುಗಳ ಮುಂದೆ ಇದ, ದ ಪ್ರತ್ಯಯಗಳು ಸೇರಲು ಭೂತಕೃದಂತ ನಾಮಗಳೂ ಉವ, ವ ಪ್ರತ್ಯಯಗಳು ಸೇರಲು ವರ್ತಮಾನ ಅಥವಾ ಭವಿಷ್ಯತ್ ಕೃದಂತ ನಾಮಗಳೂ ಅದ ಪ್ರತ್ಯಯ ಸೇರಲು ನಿಷೇಧ ಕೃದಂತನಾಮಗಳೂ ಅ, ಅಕ, ಕುಳಿ ಮುಂತಾದ ಪ್ರತ್ಯಯಗಳು ಸೇರಿ ಕಾಲಸೂಚಕವಲ್ಲದ ಕೃನ್ನಾಮಗಳೂ ಹುಟ್ಟುವವು.

ಉದಾ: ಭೂತಕೃನ್ನಾಮಕ್ಕೆ: ಮಾಡು + ಇದ = ಮಾಡಿದ, ಮಾಡಿದವನು, ಮಾಡಿದವರನ್ನು ಮುಂ.

**ನೆನಪು:** ಭೂತ ಕೃದಂತ ನಾಮಗಳಲ್ಲಿ, ಧಾತುಗಳ ಮುಂದೆ 'ದ' ಪ್ರತ್ಯಯ ಸೇರುವಾಗ ವಿಕೃತ ಭೂತ ಕ್ರಿಯಾಪದಗಳಿಗೆ ಆಗುವ ಆದೇಶಾದಿಗಳು ಇಲ್ಲಿಯೂ ಆಗುವವು. ಹೇಗೆ: ಬೀಳು + ದ = ಬಿದ್ದ, ಕೊಡು + ದ = ಕೊಟ್ಟ; ಎಚ್ಚತ್ತ, ಸತ್ತ ಮುಂ.

ವರ್ತಮಾನ ಅಥವಾ ಭವಿಷ್ಯತ್ ಕೃನ್ನಾಮಕ್ಕೆ: ಹೇಳುವ, ನುಡಿಯುವ ಮುಂತಾಗಿ. ಹೇಳುವುದರಿಂದ, ಹೇಳುವವಳಿಗೆ, ನುಡಿಯುವುದರಲ್ಲಿ, ನುಡಿಯುವುವುಗಳಿಂದ.

**ನಿಷೇಧಕೃನ್ನಾಮಕ್ಕೆ:** ನಡೆಯದ, ನಡೆಯದವರು, ನಡೆಯದವಳಿಂದ, ನಡೆಯದುದಕ್ಕೆ ಮುಂ.

**ನೆನಪು:** ಈ ಕೃನ್ನಾಮಗಳ ಮುಂದೆ ನಾಮವಿಭಕ್ತಿಪ್ರತ್ಯಯಗಳು ಸೇರುವಾಗ ಪುಲ್ಲಿಂಗ, ಸ್ತ್ರೀಲಿಂಗಗಳಲ್ಲಿ ಅವನು, ಅವಳು, ಅವರು ಎಂದೂ ನಪುಂಸಕದಲ್ಲಿ ಅದು, ಅವು, ಉದು, ಉವು ಎಂದೂ ಆಗಮ ಪ್ರತ್ಯಯಗಳು ಸೇರುವುವು.

**ಕಾಲಸೂಚಕವಲ್ಲದ ಕೃನ್ನಾಮ: ಅ ಪ್ರತ್ಯಯ** ಕುಂಟು + ಅ = ಕುಂಟ, ತುಂಟ, ಕಳ್ಳ ಮುಂ. ಅಕ, ಕ ಪ್ರತ್ಯಯಗಳು– ಕುಡಿಕ, ಕುಡಕ, ಕುಡುಕ, ತಿರಿಕ, ಬಾಯ್ಬಡಿಕ, ತಲೆಹೊಯ್ಕ, ಮುದುಕ, ನೋಟಕ ಮುಂ. (ಕಾರ್ಯವಾಚಕ)

ಕುಳಿಪ್ರತ್ಯಯ: ತಿರಿಕುಳಿ, ಇರಿಕುಳಿ, ಆಡುಗುಳಿ ಮುಂ. (ಸ್ವಭಾವವಾಚಕ)

**ಕೃದಂತಭಾವನಾಮಗಳು:** ಭಾವಾರ್ಥದಲ್ಲಿ, ಎಂದರೆ ಕ್ರಿಯಾರ್ಥದಲ್ಲಿ ಧಾತುಗಳ ಮುಂದೆ ಉದು, ಇಕೆ, ಅಪು ಮುಂತಾದ ಕೃತ್ಪ್ರತ್ಯಯಗಳು ಸೇರಲು ಕೃದ್ಭಾವನಾಮಗಳು ಹುಟ್ಟುವವು. ಭಾವಪ್ರತ್ಯಯಗಳು ಅನೇಕ ವಿಧ. ಆ ರೂಪುಗಳನ್ನು ಲನೆಯ ತರಗತಿಯ ವ್ಯಾಕರಣದಲ್ಲಿ ವಿವರವಾಗಿ ಹೇಳಿದೆ. ಇಲ್ಲಿ ಕೆಲವು ವಿಶೇಷ ನಿಯಮಗಳು.

(ಕ) ಕಾಲಾರ್ಥ ಸೂಚಕ ಕೃದಂತನಾಮಗಳ ಮುಂದೆ ಸಾಮಾನ್ಯವಾಗಿ ಎಲ್ಲ ಧಾತುಗಳ ಮೇಲೆಯೂ ಉದು ಪ್ರತ್ಯಯ ಸೇರುವುದು.

ಉದಾ: ಮಾಡಿದುದು, ಹೇಳುವುದು, ನುಡಿಯದುದು, ಬಾರದುದು, ಬರ್ಪುದು.

(ಖ) ಕೆಲವು ಧಾತುಗಳು ಸ್ವಸ್ವರೂಪದಲ್ಲಿಯೇ ಕೃದ್ಭಾವನಾಮಗಳಾಗುತ್ತಿವೆ. ಉದಾ: ನಡೆ (ಧಾ) ನಡೆ (ನಡೆವಳಿಕೆ), ಬೆಳೆ (ಹೆಚ್ಚಾಗು, ಪೈರು), ನುಡಿ (ಮಾತು), ತಡೆ (ಅಡ್ಡಿ), ಕೇಗು (ಕೇಕೆ), ತೇಗು (ತೃಪ್ತಿಯದನಿ), ಸೊಕ್ಕು (ಒಣಹೆಮ್ಮೆ) ಮುಂ.

**ನೆನಪು:** ನಾಮಗಳೂ ಧಾತುಗಳೂ ಏಕರೂಪವಾಗಿರುವಲ್ಲಿ, ಅರ್ಥಗಳು ಬೇರೆಯಾಗುವುದೂ ಉಂಟು.

ಉದಾ: ಹೊಳೆ – ಪ್ರಕಾಶಿಸು, ಹೊಳೆ – ನದಿ; ಮಡಿ – ಸಾಯು, ಮಡಿ – ಪಟ್ಟೆ.

(ಗ) ಬಿಡು, ಕೆಡು ಮುಂತಾದ ಧಾತುಗಳ ಆದಿಸ್ವರ ದೀರ್ಘವಾಗಿ ಭಾವಕೃದಂತಗಳು ಹುಟ್ಟುವವು. ಉದಾ: ಬಿಡು – ಬೀಡು, ಕೆಡು – ಕೇಡು, ಪಡು – ಪಾಡು ಮುಂ.

(ಘ) ನಿಷೇಧವು ತೋರುತ್ತಿದ್ದರೆ, ಧಾತುಗಳ ಮುಂದೆ 'ಅಮೆ' ಪ್ರತ್ಯಯ ಸೇರಿ ಕೃದ್ಭಾವನಾಮಗಳಾಗುವುವು. ಉದಾ: ಅರಿ + ಅಮೆ = ಅರಿಯಮೆ (ಅಜ್ಞಾನ), ಅಂಜಮೆ (ಅಂಜಿಕೆಯಿಲ್ಲದ).

ಈ ಕೃದಂತನಾಮ, ಕೃದ್ಭಾವಗಳ ಮುಂದೆ ನಾಮವಿಭಕ್ತಿ ಪ್ರತ್ಯಯಗಳು ಸೇರುತ್ತಿವೆ. ಆದುದರಿಂದ ಇವು ಕೃದಂತನಾಮಗಳು.

**ಕೃದಂತಾವ್ಯಯಗಳು:** **ಭೂತ**ಕೃದಂತಾವ್ಯಯ: ನೋಡಿ, ನುಡಿದು, ಬಿಟ್ಟು ಮುಂ. **ವರ್ತಮಾನ**ಕೃದಂತಾವ್ಯಯ: ತಿನ್ನುತ್ತ, ದಕ್ಕಿಸುತ್ತ ಮುಂ. **ನಿಷೇಧ**ಕೃದಂತಾವ್ಯಯ: ಮರೆಯದೆ, ತಾರದೆ, ಕೊಳ್ಳದೆ ಮುಂ. **ಭಾವರೂಪ** ಅವ್ಯಯ: ಹೇಳ, ಹೇಳಲು, ಹೇಳಲಿಕ್ಕೆ, ಮರೆಯೆ, ಮರೆಯಲು, ಮರೆಯಲಿಕ್ಕೆ ಮುಂ. **ಸಂಕೇತರೂಪ** ಅವ್ಯಯ: ಬಂದರೆ, ಬರುವರೆ, ಕೇಳಿದರೆ, ಕೊಡುವರೆ ಮುಂ.

## — ಬಳಕೆ ಮತ್ತು ಕೇಳಿಕೆ —

೧. ಕುದಿ, ಕಳು, ತೀರು, ನೆಗೆ, ಮರಳು— ಈ ಧಾತುಗಳಿಂದ ಕೃದಂತ ಧಾತುಗಳನ್ನೂ ಕಾಲಸೂಚಕ ಕೃದಂತನಾಮಗಳನ್ನೂ ಸೃಷ್ಟಿಸಿರಿ.

೨. ಕೆಳಗಿನ ಶಬ್ದಗಳ ರೂಪಸಿದ್ಧಿಯನ್ನು ಹೇಳಿರಿ.
ಮೀಂಗುಲಿಗನಲ್ಲಿ, ಹೆಣದಿನಿಗೆ, ಹೊಟ್ಟಿದುದಕ್ಕೆ, ಆಳಿದವರ, ಕಲ್‌ಕುಟಿಗನಿಗೆ, ಅಟ್ಟಿಸಿದೆ, ಕಳುಹಿದರು, ಕೆಡಪಲಿ, ಮರಳ್ಚಿದೆನ್ನು, ಎಳಸುವುದು.

೩. ಮೂಲಾರ್ಥದಲ್ಲಿಯೇ ಪ್ರೇರಣಾರ್ಥ ರೂಪು ಹೇಗೆ ತೋರುವುದು? ಉದಾಹರಣ ಕೊಟ್ಟು ವಿವರಿಸಿರಿ.

೪. ಕಳಿಸಿಸಿದನು, ಹೇಳಿಸಿಸಿದನು— ಈ ರೂಪುಗಳು ತಪ್ಪೋ ಒಪ್ಪೋ? ಚರ್ಚಿಸಿರಿ.

೫. ಪ್ರೇರಣಾರ್ಥಕ ಧಾತುಗಳೆಂದರೇನು? ಅವುಗಳ ಉಪಯೋಗವನ್ನು ಉದಾಹರಣಗಳಿಂದ ಸ್ಪಷ್ಟಮಾಡಿರಿ.

೬. ಧಾತುಸ್ವರೂಪದಲ್ಲಿಯೇ ಕೃದ್ಭಾವನಾಮಗಳು ಹೇಗಾಗುತ್ತಿವೆ? ಅರ್ಥಸಾಮ್ಯ, ಅರ್ಥವೈಷಮ್ಯದ ಎರಡೂ ಬಗೆಯ ರೀತಿಗಳನ್ನು ತೋರಿಸಿರಿ.

೭. ಅತ, ವು, ವಣಿಗೆ— ಈ ಪ್ರತ್ಯಯಗಳನ್ನು ಹೊಂದಿದ ಕೃದ್ಭಾವನಾಮಗಳನ್ನು ಹೇಳಿರಿ.

೮. ಕೃತ್‌ಪ್ರತ್ಯಯಗಳಿಗೂ ಕ್ರಿಯಾವಿಭಕ್ತಿ ಪ್ರತ್ಯಯಗಳಿಗೂ ವ್ಯತ್ಯಾಸವೇನು? ಉದಾಹರಣಗಳ ಮುಖಾಂತರ ಚರ್ಚಿಸಿರಿ.

೯. ಕೃದಂತಗಳಿಂದ ಕನ್ನಡ ನುಡಿಯ ಬೆಳವಣಿಗೆಗೆ ಹೇಗೆ ಹೇಗೆ ಸಾಹಾಯ್ಯವಾಗಿದೆ? ಸ್ವಲ್ಪದರಲ್ಲಿ ವಿವರಿಸಿರಿ.



## ೮. ತದ್ಧಿತಾಂತಗಳು

**ಹಿನ್ನೋಟ: ತದ್ಧಿತಪ್ರತ್ಯಯವೆಂದರೇನು ? :** ಪ್ರಾತಿಪದಿಕಗಳ ಮುಂದೆ, ನಾಮ ವಿಭಕ್ತಿ ಪ್ರತ್ಯಯಗಳ ಹೊರತು, ಮೂಲ ಶಬ್ದಗಳನ್ನು ಹುಟ್ಟಿಸಲು ಸೇರುವ ಪ್ರತ್ಯಯಗಳು ತದ್ಧಿತ ಪ್ರತ್ಯಯಗಳು. ಉದಾ: ಸಾಲಗಾರ, ಬೀಗಿತಿ; ಗೌಡಿಕೆ ಮುಂ.

ಪ್ರಯೋಗ: ಸಾಲಗಾರ(ನಿಂದ,) ಬೀಗಿತಿ(ಯರಿಗೆ,) ಗೌಡಿಕೆ(ಯಲ್ಲಿ) ಮುಂ.

**ತದ್ಧಿತಾಂತಗಳೆಂದರೇನು ? :** ತದ್ಧಿತ ಪ್ರತ್ಯಯಗಳನ್ನು ಹೊಂದಿದ ಶಬ್ದಗಳು ತದ್ಧಿತಾಂತಗಳು.

ಉದಾ: ಕಳವಳ + ಇಸು = ಕಳವಳಿಸು, ಕನ್ನಡಿಸು, ಹುಡುಗಿ, ಕೆಂಪು ಮುಂತಾಗಿ.

**ತದ್ಧಿತಗಳಲ್ಲಿ ಬಗೆಗಳು:** ತದ್ಧಿತಾಂತಗಳಲ್ಲಿ ತದ್ಧಿತನಾಮಗಳು, ತದ್ಧಿತ ಸ್ತ್ರೀವಾಚಕಗಳು, ತದ್ಧಿತಾಂತ ಭಾವನಾಮಗಳು, ತದ್ಧಿತಧಾತುಗಳು, ತದ್ಧಿತ ಅವ್ಯಯಗಳು ಎಂದು ಸಾಮಾನ್ಯವಾಗಿ ಐದು ಬಗೆಗಳನ್ನು ಹೇಳಬಹುದು.

**ಮುನ್ನೋಟ: ತದ್ಧಿತನಾಮಗಳು:** ತದ್ಧಿತನಾಮಗಳ ಬಗೆಗೆ ೮ನೆಯ ತರಗತಿಯ ವ್ಯಾಕರಣದಲ್ಲಿ ಸುಮಾರಾಗಿ ವ್ಯುತ್ಪತ್ತಿಯನ್ನು ತಿಳಿಸಿದೆ. ನೋಡಿಕೊಳ್ಳಿರಿ. ಇಲ್ಲಿ ಕೆಲವು ಹೆಚ್ಚಿನ ಪ್ರತ್ಯಯಗಳ ವಿಷಯವನ್ನು ಮಾತ್ರ ಹೇಳುವೆವು.

| ಪ್ರತ್ಯಯ | ಯಾವ ಅರ್ಥದಲ್ಲಿ | ಪ್ರಯೋಗ |
|---|---|---|
| ಅಟಿಗ | ಅದೇ ಹೆಸರುಳ್ಳುದಾದ, ಅದರಲ್ಲಿ ತೊಡಗಿದ | ದೀವಟಿಗ, ಮಾವಟಿಗ |
| ಆಯಿಲ, ಆಳ್ವ | ಆ ಅಧಿಕಾರವನ್ನುಳ್ಳ | ಘೋಳಾಯಿಲ (ಸ್ವಾರ) |
| ಇಗ | ಮಾಡುವ, ಮಾರುವ, ತಿಳಿದವ | ಕಬ್ಬಿಗ, ಗಂದಿಗ, ಕನ್ನಡಿಗ, ಲೆಕ್ಕಿಗ |
| ಇಚ | ಅದರಲ್ಲಿ ಹುಟ್ಟಿದ | ಅಲರಿಚ(ಬ್ರಹ್ಮ), ಕಾಲುರಿಚ (ಹಳ್ಳಿಗ) |
| ಉಗ | ಅದರಲ್ಲಿಯೇ ಆಸಕ್ತ | ಪೆಣ್ಣುಗ (ಸ್ತ್ರೈಣ) ಮಣ್ಣುಗ (Meteriliast) |
| ಗ | ಅದರಲ್ಲಿ ಬಲ್ಲಿದ | ಮಾತುಗ, ಸಟಿಗ, ಪುಸಿಗ |
| ದ | ಆ ಸ್ಥಾನದಲ್ಲಿರುವ | ಅಲ್ಲಿದ (ಅಲ್ಲಿರುವ), ಇಲ್ಲಿದ (ಇಲ್ಲಿರುವ), ಎಲ್ಲಿದನೋ ಲಲಿತಾಂಗವಲ್ಲಭಂ |
| ವಳ, ವಳ್ಳ | ಅದನ್ನು ಮಾಡುವ, ಅದರಲ್ಲಿ ಅಧಿಕಾರವುಳ್ಳ | ಮಡಿವಳ, ಮಡಿವಳ್ಳ, ಸೆಜ್ಜೆವಳ್ಳ, ಪಡೆವಳ್ಳ, ಆಡುವಳ |

**ನೆನಪು:** ಇವುಗಳಲ್ಲದೆ ಅಡಿಗ ( ಉದ್ಯೋಗ ), ಅಣ (ದಿಕ್ಕು), ಆಳಿ (ಸ್ವಭಾವ), ಇಕ ( ಉಳ್ಳ ), ಕಾರ ( ಮಾಡುವ, ನಡೆವ ), ಗುಳಿ ( ಅತಿಸ್ವಭಾವ ), ವಂತ ( ಉಳ್ಳ ), ಈ ಮುಂತಾದ ಪ್ರತ್ಯಯಗಳಿಂದ ಹುಟ್ಟುವ ಶಬ್ದಗಳನ್ನು ಹಿಂದಿನ ಹೊತ್ತಗೆಗಳಲ್ಲಿ ನೋಡಿ ಕೊಳ್ಳಬೇಕು.

## ಸ್ತ್ರೀವಾಚಕಗಳು

ತದ್ಧಿತಾಂತಗಳಲ್ಲಿ ಸ್ತ್ರೀವಾಚಕ ಶಬ್ದಗಳನ್ನು ಸೃಷ್ಟಿಸಿರುವುದೊಂದು ವಿಶಿಷ್ಟ ವ್ಯವಸ್ಥೆ. ನಮ್ಮ ನಿತ್ಯ ವ್ಯವಹಾರದಲ್ಲಿ, ಅಪ್ಪ – **ಅವ್ವ,** ಅಣ್ಣ – **ಅಕ್ಕ,** ತಮ್ಮ – **ತಂಗಿ,** ಮಾವ – **ಅತ್ತೆ,** ಗಂಡ – **ಹೆಂಡಿತಿ** ಈ ಮುಂತಾಗಿ ಸ್ವತಂತ್ರ ಸ್ತ್ರೀವಾಚಕಗಳು ತೋರುತ್ತಿವೆ. ಇಷ್ಟ ರಿಂದಲೇ ವ್ಯವಹಾರಕ್ಕೆ ಸುಸೂತ್ರತೆ ಬರಲಾರದು. ಯಾವುದೇ **ಪುರುಷವಾಚಕಕ್ಕೂ ಸ್ತ್ರೀ ವಾಚಕಪದ** ಹೊಂದುವಂತೆ ಮಾಡಿರುವುದೇ ತದ್ಧಿತದ ವೈಶಿಷ್ಟ್ಯ. ಇದರಲ್ಲಿ ಮುಖ್ಯವಾಗಿ ಇ, ಎ, ಇತಿ, ಇತ್ತಿ, ಗಿತಿ, ಗಿತ್ತಿ ಮುಂತಾದುವು ಹೆಚ್ಚಾಗಿ ಬಳಕೆಯಲ್ಲಿರುವ ಪ್ರತ್ಯಯಗಳು. ಇತಿ, ಇತ್ತಿ ಎಂಬುವು ಸ್ತ್ರೀ ಎಂಬರ್ಥದ ತದ್ಭವ ಶಬ್ದಗಳೇ ಎಂದು ಕೆಲವರ ಅಭಿಪ್ರಾಯವಿದೆ.

( ಸಂಸ್ಕೃತ ) ಸ್ತ್ರೀ, ( ಪ್ರಾಕೃತ ) ಇತ್ಥೀ, ( ತದ್ಭವ ) ಇತ್ತಿ, ಇತಿ ಮುಂ.

ಇ: ( ಹುಡುಗ + ಇ ) ಹುಡುಗಿ, ಮುದುಕಿ, ಕುರುಡಿ, ಕಿವುಡಿ, ಕುಂಟಿ ಮುಂ.

ಇತಿ: ( ಬೀಗ + ಇತಿ ) ಬೀಗಿತಿ, ಗೋವಳಿತಿ, ಕಮ್ಮರಿತಿ, ಗಂದಿಗಿತಿ ಮುಂ.

ಇತಿ, ಗಿತಿ, ಗಿತ್ತಿ: ಬೀಗಿತ್ತಿ, ಅಗಸಗಿತ್ತಿ, ಕಳಸಗಿತ್ತಿ, ಒಕ್ಕಲುಗಿತ್ತಿ.

ಎ: ( ಜಾಣ + ಎ ) ಜಾಣೆ, ಹೆಳವೆ, ಎಬಡೆ, ದಡ್ಡೆ ಮುಂ.

ಗಾತಿ: ( ಆಟಗಾರ + ತಿ ) ಆಟಗಾತಿ, ಮಾಲೆಗಾತಿ, ಮಾಯಗಾತಿ ಮುಂ. ( ಗಾತಿ ಎಂಬುದು ಗಾರ್ತಿ ಎಂದೂ ಬಳಕೆಯಲ್ಲಿದೆ. )

**ವಿಚಾರ:** ಈ ಪ್ರತ್ಯಯಗಳಲ್ಲಿ, ' ತಾನೇ ಆ ಕೆಲಸವನ್ನು ಮಾಡುವಳು ' ಮತ್ತು ಆ ಕೆಲಸವನ್ನು ಮಾಡುವವನ ' ಸ್ತ್ರೀ ' ಎಂಬರ್ಥ ಸ್ಪಷ್ಟವಾಗುವಂತೆ ನಿರ್ದಿಷ್ಟ ಪ್ರತ್ಯಯ ಗಳಾಗುವುದು ಅವಶ್ಯವಿದೆ.

ಬ್ರಾಹ್ಮಣೀ: ಬ್ರಾಹ್ಮಣ್ಯಕರ್ಮಗಳನ್ನು ನೆರವೇರಿಸುವವಳು.

ಬ್ರಾಹ್ಮಣಿತಿ: ಬ್ರಾಹ್ಮಣನ ಹೆಂಡಿತಿ.

ಶೂದ್ರಾ: ಸೇವಾಕಾರ್ಯದಲ್ಲಿ ತೊಡಗುವವಳು.

ಶೂದ್ರಾಣಿ: ಶೂದ್ರನ ಹೆಂಡಿತಿ.

ಸಂಸ್ಕೃತದಲ್ಲಿ ಈ ಬಗೆಯ ಸ್ತ್ರೀ ಪ್ರತ್ಯಯಗಳ ವ್ಯವಸ್ಥೆಯಿದೆ. ಆದರಂತೆ ಪುರುಷ ವಾಚಕ ವಿಶೇಷಣಗಳಿಗೆ ಆ, ಈ ಪ್ರತ್ಯಯಗಳು ಸೇರುವಾಗಲೂ ' ಅವಳತನ 'ವನ್ನೇ ತೋರಿಸುತ್ತಿವೆ. ಕನ್ನಡದಲ್ಲಿಯೂ ಈ ಬಗೆಯ ವ್ಯವಸ್ಥೆಯಾದರೆ ಚೆನ್ನು ಎನಿಸುತ್ತದೆ.

ಅರಸಿ: ಸ್ವಯಂ ಸಿಂಹಾಸನದ ಮೇಲಿರುವವಳು.

ಅರಸಿತಿ: ಅರಸನ ಹೆಂಡಿತಿ.

ಮುದುಕಿ: ವಯಸ್ಸಾದ ಹೆಣ್ಣುಮಗಳು.

ಮುದುಕಿತಿ: ಮುದುಕನ ಹೆಂಡಿತಿ.

ಹೀಗೆಯೇ ಒಂದೊಂದು ವ್ಯವಸ್ಥೆಯನ್ನು ಕಲ್ಪಿಸುವುದು ವಿದ್ವಾಂಸರ ಕರ್ತವ್ಯ.

**ತದ್ಧಿತಭಾವನಾಮ:** ನಾಮಗಳ ಮುಂದೆ ಭಾವಾರ್ಥದಲ್ಲಿ ಇಕೆ, ತನ ಮೊದಲಾದ ಪ್ರತ್ಯಯಗಳು ಸೇರಿ ತದ್ಧಿತಭಾವನಾಮಗಳಾಗುವುವು.

ಉದಾ: ಜಾತಿವಾಚಕ— ಬ್ರಾಹ್ಮಣಿಕೆ, ಕ್ಷತ್ರಿಯತ್ವ, ಹೆಂಗುಸುತನ ಮುಂತಾಗಿ.

ಗುಣವಾಚಕ— ಶೂರತ್ವ, ಶೂರತನ, ದೊಡ್ಡಿತೆ, ದೊಡ್ಡಸ್ತಿಕೆ, ಕಪ್ಪು, ಜಾಣ್ಮೆ ಮುಂ.

ಕ್ರಿಯಾವಾಚಕ— ತಳವಾರಿಕೆ, ಗೌಡಿಕೆ, ಹರಯತನ, ಒಡೆತನ, ಶಿಷ್ಯತ್ವ ಮುಂ.

**ನೆನಪು:** ತದ್ಧಿತನಾಮ, ಸ್ತ್ರೀವಾಚಕ, ಭಾವನಾಮಗಳ ಮುಂದೆ ನಾಮವಿಭಕ್ತಿ ಪ್ರತ್ಯಯಗಳು ಸೇರುವುವು.

**ತದ್ಧಿತಧಾತುಗಳು:** ದೇಶ್ಯ— ಕನ್ನಡಿಸು, ಹವಣಿಸು, ಎಣಿಸು, ಕಳವಳಿಸು ಮುಂ.

ಸಂಸ್ಕೃತದಿಂದ— ಕರುಣಿಸು, ದುಃಖಿಸು, ಸಮ್ಮತಿಸು, ವಿಚಾರಿಸು ಮುಂತಾಗಿ.

ತದ್ಭವದಿಂದ— ಬಣ್ಣಿಸು; ಸೊಗಯಿಸು, ಪಳಯಿಸು, ಪವಣಿಸು ಮುಂ.

**ನೆನಪು:** ಈ ಧಾತುಗಳಿಗೆ ಕ್ರಿಯಾವಿಭಕ್ತಿ ಪ್ರತ್ಯಯಗಳು ಅನ್ವಯಿಸುವುವು.

**ತದ್ಧಿತ ಅವ್ಯಯಗಳು:** ಚಂದ್ರನಂತೆ, ಚಂದ್ರನವೊಲ್, ಮನೆತನಕ, ಮೊಳಕಾಲ ಮಟ್ಟು, ಅಲ್ಲಿಯ ವರೆಗೆ, ನಿನಗೋಸುಗ, ಹೆಂಡಿತಿಯ ಸಲುವಾಗಿ ಮುಂತಾಗಿ.

## ಕೃತ್—ತದ್ಧಿತಾಂತಗಳು

ಕೃದಂತ ಮತ್ತು ತದ್ಧಿತಾಂತ ಎಂದು ಭೇದ ಮಾಡಿರುವುದು ಸ್ಥೂಲ ದೃಷ್ಟಿಯಿಂದ. ತಿಳಿಗಣ್ಣಿನಿಂದ ನೋಡಿದಾಗ ಅವೆರಡೂ ಒಟ್ಟಾಗಿದ್ದುದೂ ಕಂಡು ಬರಬಹುದು.

ಆಟಗಾರ = ಆಟ + ಆಟ (ತದ್ಧಿತ) = ಆಡು + ಅ + ಆಟ. ಕೃದಂತ.

ಹೀಗೆಯೇ, ಮಾಟಕಾರ, ಸಾಲಗುಳಿ (ಕೊಳ್ + ಇ = ಕುಳಿ), ಹೆಣದಿನಿ ಮುಂತಾದ ಶಬ್ದಗಳು ಕೃತ್—ತದ್ಧಿತಾಂತಗಳಾಗಿ ತೋರುವುವು.

## — ಬಳಕೆ ಮತ್ತು ಕೇಳಿಕೆ —

೧. ಗಂದಿಗಿತಿ, ಮೊದಲಗಿತ್ತಿ, ಕುಂಟಿ, ಅರಸಿ, ಪೂವಡಿಗ, ಆಟಗುಳಿ, ಧೈರ್ಯ, ಕಬ್ಬಿಗ, ಫೋಳಾಯಿಲ, ಲೆಕ್ಕಿಗ, ಅಲರಿಚ, ಬಣ್ಣಿಸು- ಇವುಗಳ ರೂಪನಿಷ್ಪತ್ತಿ ಹೇಳಿರಿ.

೨. ಅದರಲ್ಲಿ ಹುಟ್ಟಿದ, ಅದನ್ನು ಮಾಡುವ, ಅದೇ ಹೆಗ್ಗುರುತುಳ್ಳ— ಈ ಅರ್ಥದಲ್ಲಿ ಯಾವ ಯಾವ ತದ್ಧಿತ ಪ್ರತ್ಯಯಗಳು ತೋರುತ್ತಿವೆ ? ಉದಾಹರಿಸಿರಿ.

೩. ಮಡಿವಳ ಶಬ್ದದ ಸ್ತ್ರೀವಾಚಕವನ್ನು, ತೃತೀಯಾ, ಸಪ್ತಮಿ, ಸಂಬೋಧನ ವಿಭಕ್ತಿಗಳಲ್ಲಿ ಹೇಳಿರಿ.

೪. ತದ್ಧಿತ ಸ್ತ್ರೀ ಪ್ರತ್ಯಯಗಳೆಂದರೇನು ? ಅವು ಬಳಕೆಯಲ್ಲಿ ಬರಲೇನು ಕಾರಣ ? ಸ್ವಲ್ಪದರಲ್ಲಿ ಚರ್ಚಿಸಿರಿ.
೫. ಸ್ತ್ರೀ ಪ್ರತ್ಯಯ ದೃಷ್ಟಿಯಿಂದ ಕನ್ನಡದಲ್ಲಿ ಆಗಬೇಕಾದ ಸುಧಾರಣೆ ಯಾವುದು ? ಉದಾಹರಿಸಿರಿ.
೬. ತದ್ಧಿತಾಂತಗಳೆಂದರೇನು ? ಅವುಗಳಲ್ಲಿ ಎಷ್ಟು ಬಗೆ ?
೭. ತದ್ಧಿತ ಭಾವನಾಮಗಳು ಹೇಗಾಗುವವು ? ಉದಾಹರಣ ಕೊಡಿರಿ.
೮. ಕೃತ್–ತದ್ಧಿತಾಂತಗಳೆಂದರೇನು ? ಉದಾಹರಿಸಿರಿ.

## ೯. ಸಮಾಸಗಳು

ಹಿಂದಿನ ತರಗತಿಯಲ್ಲಿ, ಸಾಧಿತಶಬ್ದ ಮತ್ತು ಅದರಲ್ಲಿಯ ಭೇದಗಳ ಬಗೆಗೆ ತಿಳಿಸಿದೆ. ಸಮಾಸಪದವೂ ಸಾಧಿತ ಶಬ್ದಗಳಲ್ಲಿಯೇ ಒಂದು ಪ್ರಕಾರ.

ಆಟ, ಜಾಣ್ಮೆ, ಕೆಂಜೆಡೆ, ಇಪ್ಪತ್ತು, ಹಬ್ಬಹುಣ್ಣಿವೆಗಳು, ಗಿಳಿಹಸಿರು, ನಗೆ, ಕುಣಿತ, ಸೊಕ್ಕುಜವ್ವನ, ಭೂದಾನ, ನೆನಹು, ಕನವರಿಕೆ, ಎಳಗೂಸು, ಎಣ್ದೆಸೆ, ತಲೆನೋವು, ಪ್ರೇಮ-ಲತೆ.

ಈ ಶಬ್ದಗಳನ್ನು ಸಾಧಿತ ಶಬ್ದ ವಿಭಾಗಗಳಂತೆ ವಿಂಗಡಿಸಿ ಬರೆಯಿರಿ.

**ಸಮಾಸವೆಂದರೇನು ?:** ಎರಡು ಇಲ್ಲವೆ ಹೆಚ್ಚು ಪದಗಳು ಕೂಡಿ ಒಂದೇ ಅರ್ಥವನ್ನು ಹೇಳುವ ಒಂದು ಪದವಾಗುವುದು ಸಮಾಸ.

**ವಿಗ್ರಹವೆಂದರೇನು ?:** ಸಮಸ್ತಪದದ ಅರ್ಥವನ್ನು ಸ್ವಲ್ಪದರಲ್ಲಿ ವಿವರಿಸುವ ವಾಕ್ಯವಾಗಲಿ ವಾಕ್ಯಾಂಶವಾಗಲಿ ವಿಗ್ರಹ.

**ಸಮಸ್ತಪದದ ಮುಖ್ಯ ಲಕ್ಷಣ:** ವಿಗ್ರಹದಲ್ಲಿಯ ಪದಗಳು ಸಮಾಸವಾಗುವಾಗ ನಡುವಿನ ವಿಭಕ್ತಿ ಪ್ರತ್ಯಯಗಳೂ ಆಗಮ ಪ್ರತ್ಯಯಗಳೂ ಲೋಪವಾಗುವುದು ಸಮಾಸದ ಮುಖ್ಯ ಲಕ್ಷಣ. ಕ್ವಚಿತ್‌ಪ್ರಸಂಗದಲ್ಲಿ ನಡುವೆ ವಿಭಕ್ತಿಪ್ರತ್ಯಯ ಉಳಿಯಬಹುದು.

ಹೇಗೆ: ತಲೆಗಿಂಬು, ನಾಡಗುಡಿ ಮುಂ.

**ಪದಗಳ ಹೆಸರು:** ಸಮಾಸದಲ್ಲಿ ಮೊದಲನೆಯದು ಪೂರ್ವಪದ ಅಥವಾ ಆದಿಪದ; ಎರಡನೆಯದು ಅಥವಾ ಉಳಿದುವು ಉತ್ತರಪದ ಇಲ್ಲವೆ ಅಂತ್ಯಪದಗಳು.

**ಸಮಾಸದಲ್ಲಿ ಮುಖ್ಯಪದವೆಂದರೇನು ?:** ಸಮಸ್ತಪದ ಸಹಿತವಾದ ವಾಕ್ಯರಚನೆಯಲ್ಲಿ ಕ್ರಿಯಾಪದವನ್ನು ಸಂಬಂಧಿಸುವ (ಸಮಸ್ತಪದ) ವಿಭಾಗವೇ ಮುಖ್ಯಪದ.

**ಸಮಾಸ ಭೇದಗಳು:** ಪದಗಳ ಮುಖ್ಯತ್ವದ ದೃಷ್ಟಿಯಿಂದ ನೋಡಿದರೆ—

(ಅ) **ಉತ್ತರಪದ ಮುಖ್ಯ:** ತತ್ಪುರುಷ, ಕರ್ಮಧಾರಯ, ದ್ವಿಗು, ಕ್ರಿಯಾ ಸಮಾಸಗಳು.

(ಆ) **ಪೂರ್ವಪದ ಮುಖ್ಯ:** ಅವಯವಿ ಅಥವಾ ಅಂಶಿ ಸಮಾಸ.

(ಇ) **ಸರ್ವಪದಾರ್ಥ ಮುಖ್ಯ:** ದ್ವಂದ್ವ ಸಮಾಸ.

(ಈ) **ಸರ್ವಪದ ಅಮುಖ್ಯ:** ಬಹುವ್ರೀಹಿ ಸಮಾಸ.

## ಪೂರ್ವಜ್ಞಾನದ ಸಂಕ್ಷಿಪ್ತ ಪರಿಚಯ

**ತತ್ಪುರುಷ:** ಪೂರ್ವೋತ್ತರ ಪದಗಳೆರಡೂ ನಾಮಪದಗಳಾಗಿರುವುದು ತತ್ಪುರುಷ ಸಮಾಸ. ಇದರಲ್ಲಿ ಅಮುಖ್ಯವಾದ ಪೂರ್ವಪದ ದ್ವಿತೀಯೆಯಿಂದ ಸಪ್ತಮಿಯ ವರೆಗೆ ಎಲ್ಲ ವಿಭಕ್ತಿಗಳಿಂದಲೂ ಮುಖ್ಯವಾದ ಉತ್ತರಪದವನ್ನು ಸಂಬಂಧಿಸುವುದು.

**ಕರ್ಮಧಾರಯ:** ಉತ್ತರ ಪದಾರ್ಥ ಮುಖ್ಯವಾಗಿ, ವಿಶೇಷಣ–ಉಪಮಾನ–ಉಪಮೇಯ ಮುಂತಾದುವು ಪೂರ್ವಪದವಾಗಿರುವುದು ಕರ್ಮಧಾರಯ ಸಮಾಸ.

ಇದರಲ್ಲಿ ಎರಡೂ ವಿಶೇಷಣಗಳಿರುವುದೂ ಉಂಟು. ಈ ಸಮಾಸದಲ್ಲಿ ಮುಖ್ಯವಾಗಿ ಎಂಟು ಪ್ರಕಾರಗಳಿವೆ.

ಕರ್ಮಧಾರಯದ ಪ್ರಕಾರಗಳು ಯಾವವು? ಉದಾಹರಣಗಳಿಂದ ವಿವರಿಸಿರಿ.

**ದ್ವಿಗು ಸಮಾಸ:** ಒಟ್ಟು ಎಂಬ ಅರ್ಥ ತೋರುವಾಗ ಸಂಖ್ಯಾಪೂರ್ವಪದ ಕರ್ಮಧಾರಯವೇ ದ್ವಿಗುಸಮಾಸವಾಗುವುದು.

ಸಂಖ್ಯಾಪೂರ್ವ ಕರ್ಮಧಾರಯ ಮತ್ತು ದ್ವಿಗು ಸಮಾಸಗಳ ವ್ಯತ್ಯಾಸವನ್ನು ಉದಾಹರಣಗಳಿಂದ ವಿವರಿಸಿರಿ.

**ದ್ವಂದ್ವಸಮಾಸ:** ಸರ್ವಪದಗಳಿಗೂ ಮುಖ್ಯತ್ವವನ್ನುಳ್ಳ ಹಲವು ಪ್ರಥಮಾಂತ ಪದಗಳು ಕೂಡಿ ಆಗುವುದು ದ್ವಂದ್ವಸಮಾಸ. ಇದರಲ್ಲಿ....

(ಕ) **ಇತರೇತರ ದ್ವಂದ್ವ:** ಕಂದಮೂಲ ಫಲಂಗಳ್, ಮಂತ್ರಿಸೇನಾಪತಿಗಳು... ಈ ಸಮಸ್ತಪದ ಬಹುಶಃ ಬಹುವಚನದಲ್ಲಿ ನಿಲ್ಲುವುದು.

**ಸಮಾಹಾರ ದ್ವಂದ್ವ:** ಕೋಟೆಕೊತ್ತಳ, ಗಿಡಬಳ್ಳಿ, ಹೆಣ್ಣುಗಂಡು....

ಈ ಅನ್ಯೋನ್ಯ ಪದಗಳು ಏಕವಚನಾಂತವಾಗಿಯೇ ನಿಲ್ಲುವುವು.

**ಏಕಶೇಷ ದ್ವಂದ್ವ:** ಮನೆಗಳ್ – ಮನೆಯು ಮನೆಯು ಮನೆಯು....

ಸೋದರರ್ – ಸೋದರರು ಸೋದರಿಯರು ..

ಹುಡುಗರು – ಹುಡುಗರು ಹುಡುಗಿಯರು....

ರೂಪ-ಗುಣ-ಕಾರ್ಯ-ಬಾಂಧವ್ಯಗಳಿಂದ ಒಂದನ್ನೊಂದು ಸಂಬಂಧಿಸುವ ಹಲವು ಪದ ಗಳು ಕೂಡಿ ಒಂದೇ ಪದವಾಗುವುದು. (ಏಕಶೇಷ: ಒಂದೇ ಉಳಿಯುವುದು)

ಈಗ ಉಳಿದ ಸಮಾಸಗಳ ತಿಳಿವಳಿಕೆಯನ್ನು ಮಾಡಿಕೊಳ್ಳೋಣ.

## ಪೂರ್ವಪದಾರ್ಥ

## ಮುಖ್ಯವಾದ ಅವಯುವಿ ಅಥವಾ ಅಂಶಿಸಮಾಸ

**ಅವಯುವಿ ಅಥವಾ ಅಂಶಿ ಎಂದರೇನು?: ಅವಯುವ–ಅಂಶ** ಎಂದರೆ ಇಡಿಯ ಒಡವೆಯ ಒಂದು ಭಾಗ. ಈ ಶಬ್ದಕ್ಕೆ ಉಳ್ಳ ಎಂಬರ್ಥದಲ್ಲಿ 'ಇ' ಪ್ರತ್ಯಯವನ್ನು ಸೇರಿಸಲು **ಆ ಭಾಗವನ್ನುಳ್ಳ ಅವಯುವಿ (ಅಂಶಿ) ಎಂದರೆ ಪೂರ್ಣವಸ್ತು** ಎಂದು ಅರ್ಥವಾಗುವುದು. ಹೀಗೆ....

ಅವಯುವ ಅಥವಾ ಅಂಶವನ್ನು ಹೇಳುವ ಪದ ಪೂರ್ವದಲ್ಲಿಯೂ; ಅವಯುವಿ (ಅಂಶಿ) ಯನ್ನು ಹೇಳುವ ಪದ ಉತ್ತರದಲ್ಲಿಯೂ ಇರುವುದು ಅವಯುವಿ ಅಥವಾ ಅಂಶಿ ಸಮಾಸ.

**ವಿಚಾರ: ತುದಿಬೆರಳು** ಮುರಿದಿದೆ. ಈ ವಾಕ್ಯದಲ್ಲಿ ತುದಿ–ಅವಯುವ ಪದ, ಬೆರಳು–ಪೂರ್ಣವಸ್ತುಪದ. ಮುರಿಯುವ ಕ್ರಿಯೆ ಪೂರ್ವಪದವಾದ **"ತುದಿ"** ಎಂಬುದಕ್ಕೇ ಸಂಬಂಧಿಸಿದೆ. ಆದುದರಿಂದ ಇದು ಪೂರ್ವಪದ ಮುಖ್ಯ ಸಮಾಸ; ಮತ್ತು ಅವಯುವ–ಅವಯುವಗಳನ್ನುಳ್ಳುದರಿಂದ **ಅವಯುವಿ** (ಅಂಶಿ) ಸಮಾಸ.

**ವಿಗ್ರಹ ಹೇಗೆ?:** ಈ ಸಮಸ್ತಪದದ ವಿಗ್ರಹ ಮಾಡುವಾಗ, ಮೊದಲಿಗೆ ಅಂತ್ಯದಲ್ಲಿರುವ **ಅವಯುವಿಪದದ ಷಷ್ಠ್ಯಂತರೂಪವನ್ನು** ಹೇಳಿ, ಅವಯುವವಾಚಕ ಪೂರ್ವಪದವನ್ನು ಆಮೇಲೆ ಹೇಳಬೇಕು. ಸಮಸ್ತಪದದಲ್ಲಿ ಮಾತ್ರ ಅಂಶವಾಚಕಪದ ಪೂರ್ವದಲ್ಲಿಯೇ ಉಳಿಯುವುದು.

**ಹೇಗೆ?:** ನಡುಮನೆ – **ಮನೆಯ** ನಡು; ಅಂಗಾಲು – **ಕಾಲಿನ** ಅಡಿ; ಹಿಂದಲೆ – **ತಲೆಯ** ಹಿಂದು; ನಟ್ಟಿರುಳ್ = **ಇರುಳಿನ** ನಡು ಮುಂತಾಗಿ.

**ವಿಶೇಷ ವಿಚಾರ:** ಈ ಅವಯುವಿ ಸಮಾಸವನ್ನು ಶಬ್ದಮಣಿ ದರ್ಪಣದಲ್ಲಿ **ಅವ್ಯಯೀಭಾವ** ಎಂದು ಹೆಸರಿಸಲಾಗಿದೆ. ಆದರೆ ಸಂಸ್ಕೃತದಲ್ಲಿ ಅವ್ಯಯೀಭಾವ ಸಮಾಸ ಬೇರೆ ರೀತಿಯಾಗಿದೆ.

**ಹೇಗೆ: ಪ್ರತಿ**ದಿನಂ – **ದಿನೇ ದಿನೇ; ಅನು**ರೂಪಂ: ರೂಪಸ್ಯಯೋಗ್ಯಂ. **ಯಥಾ ಶಕ್ತಿ – ಶಕ್ತಿಂ** ಅನತಿಕ್ರಮ್ಯ........ಮುಂ.

ವಿಗ್ರಹದಲ್ಲಿ ವಿವರಣೆಗಾಗಿ ಬರುವ ಶಬ್ದಗಳಿಗೆ ಪ್ರತಿಯಾಗಿ ಸಮಸ್ತಪದದಲ್ಲಿ ಉಪಸರ್ಗ ಇಲ್ಲವೆ ಅವ್ಯಯರೂಪಗಳು ನಿಲ್ಲುತ್ತಿವೆ. ಕನ್ನಡದಲ್ಲಿ ಅಡಿ, ಮೇಲು, ಹಿಂದು, ಮುಂದು ಮುಂತಾದುವನ್ನು ನಿಶ್ಚಿತವಾಗಿ ಅವ್ಯಯಗಳೆಂದು ಹೇಳುವಂತಿಲ್ಲ. ಮತ್ತು ಕನ್ನಡದಲ್ಲಿ

ತೋರುವ ಅವಯವ-ಅವಯವಿಗಳ ಸಂಬಂಧ ಸಂಸ್ಕೃತದಲ್ಲಿ ತೋರುವುದಿಲ್ಲ. ಈ ಕಾರಣದಿಂದ, ಕನ್ನಡ ನುಡಿಯಲ್ಲಿ ಅವ್ಯಯೀಭಾವ ಎಂಬುದರ ಬದಲು, **ಅಂಶಿ** ಸಮಾಸ ಎಂದು ಶಬ್ದಾನುಶಾಸನದಲ್ಲಿ ಸೂಚಿಸಲಾಗಿದೆ. ಇದೇ ಯುಕ್ತವೆಂದು ತೋರುತ್ತಿದೆ. ಆದರೆ ನಾವು **ಅವ್ಯಯೀಭಾವ** ಎಂಬ ಶಬ್ದಕ್ಕೆ ಧ್ವನಿಸಾಮ್ಯ ತೋರುವಂತೆ, **ಅಂಶಿ**ಯಬದಲು **ಅವಯವಿ ಸಮಾಸ** ಎಂದು ಹೆಸರಿಸಿದ್ದೇವೆ.

**ಸಮಾಸ ಕಾರ್ಯಗಳು:** ಅವಯವಿ ಸಮಾಸದ ಪೂರ್ವಪದಗಳಲ್ಲಿ ಮೇಗು-ಮೇಲೆ, ಕೆಳಗು, ಮುಂದೆ–ಮುನ್, ಪಿಂದೆ–ಹಿಂದೆ–ಪಿನ್–ಹಿನ್, ತುದಿ, ಕಡೆ, ನಡು ಮುಂತಾದ ಪದಗಳು ತೋರುವುವು.

ಇವುಗಳಲ್ಲಿ ಕಡೆ–ನಡುಗಳನ್ನುಳಿದು ಉಳಿದುವುಗಳ ಅಂತ್ಯವರ್ಣಕ್ಕೆ ಸಾಮಾನ್ಯವಾಗಿ ಲೋಪಬರುವುದು. ನಡು ಎಂಬುದಕ್ಕೆ ಸ್ವರಾದಿಶಬ್ದ ಪದದಲ್ಲಿರುವಾಗ ನಟ್ ಎಂದೂ ಅಡಿ ಎಂಬುವುದಕ್ಕೆ 'ಅಂ' ಎಂದೂ ಆದೇಶವಾಗುವುದು.

**ಹೇಗೆ:** ತಲೆಯ ಮುಂದು–ಮುಂದಲೆ; ಇರುಳನಡು–ನಟ್ಟಿರುಳು; ಹಗಲಿನ ನಡು–ನಡುಹಗಲು; ಕಾಲಿನ ಅಡಿ–ಅಂಗಾಲು.

## ಸರ್ವ ಪದಾರ್ಥ ಅಮುಖ್ಯವಾದ ಬಹುವ್ರೀಹಿ ಸಮಾಸ

**ಬಹುವ್ರೀಹಿ ಸಮಾಸವೆಂದರೇನು?:** ಸಮಾಸದಲ್ಲಿಯ ಪೂರ್ವ–ಉತ್ತರ ಪದಗಳ ಅರ್ಥಗಳೆರಡೂ ಅಮುಖ್ಯವಾಗಿದ್ದು, ಅವುಗಳಿಂದ ಸೂಚಿತವಾಗುವ ಮೂರನೆಯ ಅರ್ಥವೊಂದು ಪ್ರಧಾನವಾಗಿರುವುದು ಬಹುವ್ರೀಹಿಸಮಾಸ.

ಹೇಗೆ: ಸರೋಜಮುಖಿ, ಶೂಲಪಾಣಿ ಮುಂ.

**ವಿಚಾರ:** ಸರೋಜಮುಖಿ–**ಸರೋಜದಂತೆ ಮುಖವು** ಯಾವಳಿಗೆ ಅವಳು. ಇಲ್ಲಿ ಸರೋಜ–ಕಮಲ, ಮುಖ–ಮೋರೆ ಈ ಎರಡೂ ಅರ್ಥಗಳಿಗೆ ಮುಖ್ಯತ್ವವಿಲ್ಲ; ಆದರೆ ಈ ಎರಡರಿಂದ ಸಂಚಿತವಾಗುವ **ಸುಂದರಮುಖದ** ಸ್ತ್ರೀ ಎಂಬ **ಮೂರನೆಯ ಪದ ಮುಖ್ಯತ್ವವನ್ನು** ಪಡೆದಿದೆ.

ಶೂಲಪಾಣಿ–**ಶೂಲವು ಪಾಣಿಯಲ್ಲಿ** ಯಾವನಿಗೆ ಅವನು.

ಇಲ್ಲಿ–ಶೂಲ–ಒಂದು (ಶಿವನ) ಆಯುಧ, ಪಾಣಿ–ಕೈ; ಈ ಎರಡೂ ಅರ್ಥಗಳು ಅಮುಖ್ಯವಾಗಿವೆ; ಆದರೆ, ಆ ಎರಡೂ ಶಬ್ದಗಳಿಂದ ಸೂಚಿತವಾಗುವ, ಎಂದರೆ ಪಾಣಿಯಲ್ಲಿ ಶೂಲವನ್ನು ಹಿಡಿದ ಶಿವ–ಎಂಬ ಅನ್ಯಪದದ ಅರ್ಥ ಮುಖ್ಯವಾಗಿದೆ.

ಆದುದರಿಂದ, ಇಂತಹವೆಲ್ಲ ಸಮಸ್ತಪದಗಳ ಅಮುಖ್ಯತೆಯ ಕಾರಣದಿಂದ ಬಹುವ್ರೀಹಿ ಸಮಾಸವೆನಿಸುತ್ತಿವೆ. ಇದರಲ್ಲಿ ಕೆಲವು ಸೂಕ್ಷ್ಮಭೇದಗಳೂ ಇವೆ.

**ಸಮಾನಾಧಿಕರಣ ಬಹುವ್ರೀಹಿ:** ತಾವರೆಗಣ್ಣು – ತಾವರೆಯಂತಹದು ಕಣ್ಣು ಯಾವನಿಗೆ ಅವನು. ಈ ವಿಗ್ರಹದೊಳಗೆ ಪೂರ್ವೋತ್ತರ ಪದಗಳು ಲಿಂಗ-ವಚನ-ವಿಭಕ್ತಿಗಳಿಂದ ಹೊಂದಿಕೊಂಡಿವೆ. ಈ ಹೊಂದಿಕೆಯೇ ಸಮಾನಾಧಿಕರಣ.

ಲಿಂಗ – ವಚನ – ವಿಭಕ್ತಿಗಳಿಂದ ಒಂದಾಗಿರುವ ಪದಗಳನ್ನುಳ್ಳುದು ಸಮಾನಾಧಿಕರಣ ಬಹುವ್ರೀಹಿ. **ಉದಾ:** ನಿಡುಮೂಗಿ, ಪೇರೊಡಲಿ, ಪೀತವಿಷ ಮುಂ.

**ವ್ಯಧಿಕರಣ ಬಹುವ್ರೀಹಿ:** ಪೆರೆದಲೆಯ – ಪೆರೆಯು ತಲೆಯಲ್ಲಿ ಯಾವನಿಗೆ ಅವನು. ಈ ವಿಗ್ರಹದಲ್ಲಿ ಸಮಸ್ತಪದಗಳ **ವಿಭಕ್ತಿಗಳು ಬೇರೆ ಬೇರೆ**ಯಾಗಿವೆ, ಎಂದರೆ ವ್ಯಧಿಕರಣವಲ್ಲಿವೆ. ಲಿಂಗ - ವಚನ - ವಿಭಕ್ತಿಗಳ ಸಂಪೂರ್ಣ ಹೊಂದಿಕೆಯಲ್ಲದಿರುವುದು ವ್ಯಧಿಕರಣ ಬಹುವ್ರೀಹಿ:

ವ್ಯಧಿಕರಣ ಪದಗಳಿಂದಾಗಿರುವುದು ವ್ಯಧಿಕರಣ ಬಹುವ್ರೀಹಿ ಸಮಾಸ.

ಹೇಗೆ: ಚಕ್ರಪಾಣಿ, **ಚಕ್ರವು ಪಾಣಿಯಲ್ಲಿ** ಯಾವನಿಗೆ ಅವನು. ವಿಗ್ರಹದ ಪದಗಳಲ್ಲಿ ಬೇರೆ ಬೇರೆ ವಿಭಕ್ತಿಗಳು ತೋರುವುದು ವ್ಯಧಿಕರಣ. ಹೀಗೆಯೇ ಹಣೆಗಣ್ಣ, ಸರೋಜನಾಭ ಮುಂ.

**ವ್ಯತಿಹಾರ ಬಹುವ್ರೀಹಿ:** ಕೋಲಾಕೋಲಿ–ಕೋಲಿನಿಂದ ಕೋಲಿನಿಂದ ಕಾದಾಡುವುದು.

ಈ ವಿಗ್ರಹದಲ್ಲಿ ಕಾದಾಟ ತೋರುತ್ತಿದೆ. ಕಾಳಗ, ಜಗಳ, ಯುದ್ಧ ಮುಂತಾದುವನ್ನು ವ್ಯತೀಹಾರವೆನ್ನುತ್ತಾರೆ.

ವ್ಯತೀಹಾರಾರ್ಥದಲ್ಲಿ ಮೂರನೆಯ ಪದಾರ್ಥದ ಪ್ರಧಾನತೆಯನ್ನು ಸೂಚಿಸುವುದು ವ್ಯತೀಹಾರ ಬಹುವ್ರೀಹಿ ಸಮಾಸ.

ಉದಾ: ಕೇಶಾ ಕೇಶಿ, ಮುಷ್ಟಾಮುಷ್ಟಿ, ದಂಡಾದಂಡಿ, ಹಣಾಹಣಿ ಮುಂ.

**ಸೂಚನೆ:** ಈ ಸಮಸ್ತ ಪದಗಳ ನಡುವೆ 'ಆ' ಕಾರವೂ ಕೊನೆಯಲ್ಲಿ 'ಇ' ಕಾರವೂ ಸೇರುವುವು.

**ಸಂಖ್ಯೋಭಯ ಪದ ಬಹುವ್ರೀಹಿ:** ಹತ್ತಿಪ್ಪತ್ತು – ಹತ್ತೋ ಇಪ್ಪತ್ತೋ.

ಈ ವಿಗ್ರಹದಲ್ಲಿರುವ ಸಂಖ್ಯೆಗಳಿಂದ ಪ್ರಧಾನಾರ್ಥವ ಮೂರನೆಯುಪದದಲ್ಲಿ **ಅನಿಶ್ಚಿತತೆ** ತೋರುತ್ತಿದೆ.

ಸಂಖ್ಯೆಗಳಿಂದ ಅನಿಶ್ಚಿತತೆಯನ್ನು ತೋರಿಸುವ ಅನ್ಯಪದಾರ್ಥ ಪ್ರಧಾನವಾದುದು ಸಂಖ್ಯೋಭಯಪದ ಬಹುವ್ರೀಹಿ.

ಹೀಗೆ: ಏಳೆಂಟು, ಸಾವಿರಾರು, ನೂರೆಂಟು ಮುಂ.

**ವಿಶೇಷವಿಚಾರ:** ಮೇಲೆ ತೋರಿಸಿರುವ ವಿಗ್ರಹ ರೂಪಗಳೆಲ್ಲ ಸಂಸ್ಕೃತ ಸಮಾಸ ವಿಗ್ರಹ ಪದ್ಧತಿಯ ಅನುಕರಣ. ಇದರಿಂದ, ಒಮ್ಮೊಮ್ಮೆ ವಿದ್ಯಾರ್ಥಿಗಳು ಮೋಸ ಹೋಗುವ ಸಂಭವವೂ ಇದೆ.

**ಹೇಗೆ:** ಗಿರಿಜೆ— ಗಿರಿಯಲ್ಲಿ ಜನಿಸಿದವಳು ಯಾವಳೋ ಅವಳು ಎಂದು ಭ್ರಮಿಸ ಬಹುದಾಗಿದೆ. ಇದು ಬಹುವ್ರೀಹಿಸಮಾಸವಲ್ಲ.

ಆದುದರಿಂದ, ಬಹುವ್ರೀಹಿ ಸಮಾಸದ ವಿಗ್ರಹದಲ್ಲಿ 'ಉಳ್ಳ' ಎಂಬ ಪದವನ್ನು ಸೇರಿಸಿ ಕೊಂಡು ನೋಡಬೇಕು —

ಹೇಗೆ: ಪೆರೆಯು ತಲೆಯಲ್ಲಿ ಉಳ್ಳವನು—ಪೆರೆದಲೆಯ
ನಿಡಿದು ಮೂಗು ಉಳ್ಳವನು—ನಿಡುಮೂಗಿ ಮುಂ.

**ನೆನಹು:** ಸಮಾನಾಧಿಕರಣ, ವ್ಯಧಿಕರಣ, ಉಪಮಾನ ಬಹುವ್ರೀಹಿಗಳಲ್ಲಿ ಅನ್ಯ ಪದಾರ್ಥಪ್ರಧಾನತೆಯನ್ನು ತೋರಿಸಲು ಅ, ಇ ಕಾರಗಳು ಸೇರುತ್ತಿವೆ.

**ಹೇಗೆ:** ಮುಕ್ಕಣ್ಣ, ಪೆರೆದಲೆಯ, ಕಮಲ ಮುಖಿ, ಎರಡು ಹಲ್ಲಿ ಮುಂ.

ಗುಣವಾಚಕ ವಿಶೇಷಣಗಳ ದುಕಾರಲೋಪವಾಗಿ ಉಕಾರಾದೇಶವಾಗುವುದು.

ಹೇಗೆ: ಕಡಿದುಚಾಗವು ಯಾವನಿಗೆ– ಕಡು ಚಾಗಿ, (ನಿಡಿದು) ನಿಡುದೋಳ.

## ಉತ್ತರಪದಾರ್ಥ ಪ್ರಧಾನವಾದ
## ಕ್ರಿಯಾಸಮಾಸ

**ಕ್ರಿಯಾಸಮಾಸವೆಂದರೇನು ?** ಪೂರ್ವಪದವಾದ ಕಾರಕ ಪದವು ಕ್ರಿಯಾರೂಪದ ಪ್ರಧಾನಪದದೊಡನೆ ಕೂಡಿ ಆಗುವುದು ಕ್ರಿಯಾಸಮಾಸ.

ಹೇಗೆ: ಸುಖಪಟ್ಟನು– ಸುಖಮಂ ಪಟ್ಟನು; ರಸದುಂಬಿ– ರಸದಿಂದೆ ತುಂಬಿ.

**ಸೂಚನೆ:** ಪೂರ್ವಪದವಾದ ನಾಮಪದವು ಯಾವ ವಿಭಕ್ತಿಯಲ್ಲಿಯೂ ಇರಬಹುದು. ಉತ್ತರಪದ ಕ್ರಿಯಾರೂಪವು ಕ್ರಿಯಾಪದ, ಕೃದಂತಾವ್ಯಯ ರೂಪಗಳಲ್ಲಿ ತೋರಬಹುದು.

## — ಬಳಕೆ ಮತ್ತು ಕೇಳಿಕೆ —

೧. ಕೆಳಗೆ ಕೊಟ್ಟಿರುವ ಸಮಸ್ತಪದಗಳನ್ನು ಗುರುತಿಸಿ ಹೆಸರು ಹೇಳಿರಿ.
ಮುಕ್ಕಣ್ಣು, ಮುಕ್ಕಣ್ಣ, ತಲೆಶಿರುಕ, ಈರೇಳ್ಜಗಂ, ಹೊಡೆಮರಳಿ, ಸಿಂಗಾಸಿಂಗಿ, ಕ್ರಿಮಿಕೀಟಕ, ನಟ್ಟಿರುಳ್, ಮೇಲ್ಮಾಳಿಗೆ, ಪೋಷಿತ, ಶಿವಗಣ, ಕಿಬ್ಬೊಟ್ಟೆ, ಹೆಬ್ಬೆರಳ್, ಮಾನಧನ.

೨. ಪದಗಳ ಮುಖ್ಯತ್ವದ ದೃಷ್ಟಿಯಿಂದ ಸಮಾಸಗಳಲ್ಲಿ ಎಷ್ಟು ಬಗೆಗಳಾಗುವುವು ? ಆ ಮುಖ್ಯತ್ವವನ್ನು ಹೇಗೆ ಸಿದ್ಧಿಸುವಿರಿ ?

೩. ಸಂಖ್ಯಾಪೂರ್ವ ಕರ್ಮಧಾರಯ, ದ್ವಿಗುಸಮಾಸ ಮತ್ತು ಸಂಖ್ಯೋಭಯಪದ ಬಹುವ್ರೀಹಿ— ಇವುಗಳಲ್ಲಿಯ ವ್ಯತ್ಯಾಸಗಳನ್ನು ಉದಾಹರಣಗಳಿಂದ ಸಿದ್ಧಮಾಡಿರಿ.

೪. ಬಹುವ್ರೀಹಿ ಸಮಾಸವೆಂದರೇನು ? ಒಂದು ಉದಾಹರಣವನ್ನು ಕೊಟ್ಟು ಅದರಲ್ಲಿ ಅನ್ಯಪದಾರ್ಥ ಪ್ರಧಾನತೆಯನ್ನು ಸಿದ್ಧಮಾಡಿರಿ.

೫. ಸಮಾನಾಧಿಕರಣ – ವ್ಯಧಿಕರಣಗಳು ಬಹುವ್ರೀಹಿಸಮಾಸದಲ್ಲಿ ಹೇಗೆ ಹೇಗೆ ತೋರು ವುವು? ಉದಾಹರಿಸಿರಿ.

೬. ಅವಯವಿ ಅಥವಾ ಅಂಶಿ ಸಮಾಸವೆಂದರೇನು ? ಈ ಹೆಸರಿನ ಸಾರ್ಥಕತೆಯನ್ನು ಉದಾಹರಣದಿಂದ ಸ್ಪಷ್ಟ ಮಾಡಿರಿ.

೭. ಸಂಸ್ಕೃತದ ಅವ್ಯಯಿಭಾವ ಸಮಾಸಕ್ಕೂ ಅವಯವಿ ಸಮಾಸಕ್ಕೂ ವ್ಯತ್ಯಾಸವಿದೆಯೇ ? ಇದ್ದರೆ ಯಾವ ರೀತಿಯಲ್ಲಿ? ವಿವರಿಸಿರಿ.

೮. ಅವಯವಿ ಸಮಾಸದಲ್ಲಿ ಆಗುವ ಸಂಧಿಕಾರ್ಯಗಳನ್ನು ಹೇಳಿರಿ.

## ೧೦. ಸಿದ್ಧ ಮತ್ತು ಸಾಧಿತ ಶಬ್ದಗಳ ಅರ್ಥಭೇದ

**ಅರ್ಥಭೇದ: ನಾಮಪದ:** ನಾಮ – ವಿಶೇಷಣ – ಸರ್ವನಾಮ ಧಾತು (ಕ್ರಿಯಾ ಪದ), ಅವ್ಯಯಗಳು ಶಬ್ದಗಳ ಅರ್ಥಭೇದಗಳು.

**ಪ್ರತ್ಯಯಗಳ ಪ್ರಕಾರ:** ಪ್ರಕೃತಿಗಳನ್ನೂ, ಪದಗಳನ್ನೂ ಹುಟ್ಟಿಸುವುದಕ್ಕೆ ಶಬ್ದಗಳ ಮುಂದೆ ಸೇರುವ ಅಕ್ಷರ ಅಥವಾ ಅಕ್ಷರಗಳು ಪ್ರತ್ಯಯಗಳು.

**ಪ್ರಕೃತಿಜನಕ ಪ್ರತ್ಯಯ:** ಕೃತ್, ತದ್ಧಿತ, ಸಮಸ್ತ ಎಂದು ಮೂರು ಬಗೆ. ಇವು ಗಳ ಪರಿಚಯ ಈಗಾಗಲೇ ಆಗಿದೆ. ಇವು ಪ್ರಕೃತಿಗಳನ್ನೇ ಹುಟ್ಟಿಸುತ್ತಿವೆ.

**ಪದಜನಕ ಪ್ರತ್ಯಯ:** ನಾಮ ವಿಭಕ್ತಿ ಪ್ರತ್ಯಯ, ಕ್ರಿಯಾವಿಭಕ್ತಿ ಪ್ರತ್ಯಯ. ಈ ಪ್ರತ್ಯಯಗಳು ಪದಗಳನ್ನು ಹುಟ್ಟಿಸುತ್ತಿವೆ; ಮತ್ತು ವಾಕ್ಯಗಳಲ್ಲಿ ಎಲ್ಲ ಪದಗಳ ಹೊಂದಿಕೆಯನ್ನು ಹೇಳುತ್ತಿವೆ.

ಅವ್ಯಯಗಳಿಗೆ ಪ್ರತ್ಯಯಗಳಿಲ್ಲ. ಅವು ಮೂಲಸ್ಥಿತಿಯಲ್ಲಿಯೇ ಸ್ವತಂತ್ರಪದಗಳು.

### ನಾಮಗಳು

**ನಾಮವೆಂದರೇನು ? :** ನಾಮ ವಿಭಕ್ತಿಯ ಪ್ರತ್ಯಯಗಳನ್ನು ಹೊಂದುವ ಶಬ್ದ ಗಳೆಲ್ಲ ನಾಮಗಳು. ಈ ನಾಮಗಳಲ್ಲಿ ವಸ್ತುವಾಚಕ, ಭಾವವಾಚಕ, ವಿಶೇಷಣ, ಸರ್ವ ನಾಮ ಎಂದು ಸಾಮಾನ್ಯವಾಗಿ ನಾಲ್ಕು ಬಗೆಗಳನ್ನು ಹೇಳಬಹುದು.

**ವಸ್ತುವಾಚಕ ನಾಮದಲ್ಲಿ:** ಸಾಮಾನ್ಯನಾಮ, (ರೂಢನಾಮ) ವಿಶೇಷನಾಮ (ಅಂಕಿತನಾಮ), ಅನ್ವರ್ಥಕನಾಮ (ಕೃದಂತ ತದ್ಧಿತ ಸಮಸ್ತ ನಾಮಗಳು), ಕೃದಂತ ನಾಮ, ತದ್ಧಿತನಾಮ, ಸಮಸ್ತನಾಮ ಮುಂತಾಗಿ ಭಾಗಗಳು.

**ಸಾಮಾನ್ಯ (ರೂಢ) ನಾಮ:** ಗುಡ್ಡ, ಹೊಳೆ, ಬುಧ, ಕಲ್ಲು, ಹಾವು, ಹುಲಿ, ಗಂಡುಸು, ಹೆಂಗಸು, ಬಂಗಾರ, ಹಳ್ಳಿ, ಮಾವಿನ ಮರ ಮುಂ.

ಇವು ಆ ಆ ವಸ್ತುಗಳ ಜಾತಿಯನ್ನೇ ಹೇಳುವುದಕ್ಕೆ ಸಾಮಾನ್ಯವಾಗಿ ರೂಢಿಯಲ್ಲಿ )ಂದ ಹೆಸರುಗಳು.

**ಸಂಘವಾಚಕನಾಮ:** ದಂಡು, ಜಾತ್ರೆ, ಸರ, ಮಲಾರ, ರಾಶಿ– ಇವು ಆ ವಸ್ತು ಳ ಗುಂಪಿನ ಎಂದರೆ ಸಂಘದ ಹೆಸರನ್ನು ಹೇಳುವ ನಾಮಗಳು.

**ವಿಶೇಷ (ಅಂಕಿತ) ನಾಮ:** ಗೋವಿಂದ, ಕೃಷ್ಣ, ಭುವನ, ದಿಲ್ಲಿ, ತುಂಗಭದ್ರಾ, ಹ್ಯಾದ್ರಿ– ಆ ಆ ವಸ್ತುವೊಂದನ್ನೇ ಗುರುತಿಸಲು ಇಟ್ಟ ಹೆಸರು. ಈ ನಾಮಗಳಿಗೆ ಾಮಾನ್ಯವಾಗಿ ಬಹುವಚನವನ್ನು ಹೇಳಬಾರದು.

**ಅನ್ವರ್ಥಕನಾಮ: (ಅ) ಕೃದಂತನಾಮ:** ಕಾಲಾರ್ಥಸೂಚಕ: ಹೋದವನಿಂದ, ರುವವರಿಗೆ, ಆಡದವರಲ್ಲಿ. ಕಾಲಸೂಚಕವಲ್ಲದವು: ಬಾಯ್ಬಡಿಕರು, ಆಡುಗುಳಿಗಳಿಂದ, ಲಿಹೊಯ್ಕರ ಮುಂ.

(ಆ) ತದ್ಧಿತನಾಮ: ಗಂದಿಗರನ್ನು, ಬೀಗಿತ್ತಿಯರಿಗೆ, ಪೊಳಲಿಚನ, ಅರಸಿಯೇ ಮುಂ.

(ಇ) ಸಮಸ್ತನಾಮ: ಹುಲಿದೊಗಲು, ಊರೂಟ, ಶಶಿವದನೆ, ಕಡಿಮನೆ ಮುಂ.

**ವಿಶೇಷಣ ನಾಮಗಳು:** (ಈ) ಗುಣವಾಚಕ:·ಒಳ್ಳೆಯದನ್ನು, ಕರಿಯಳಿಗೆ, ಹೊಸಬ )ದ, ಹಳಬರಲ್ಲಿ ಮುಂ.

ಈ ವಿಶೇಷಣ ನಾಮಗಳು ವಸ್ತುಗಳ ಗುಣಗಳನ್ನು ಹೇಳುತ್ತಿವೆ.

ಸಂಖ್ಯಾವಾಚಕ: ಒಂದು, ನಾಲ್ಕು, ಆರನೆಯ, ಇಬ್ಬರು, ಸಾವಿರ ಮುಂ.

ಪರಿಮಾಣವಾಚಕ: ಅಷ್ಟು, ಇಷ್ಟು, ಸೇರು, ಗುಂಜಿ, ಮೊಳ, ಹರದಾರಿ ಮುಂ.

ಕೃದಂತ–ತದ್ಧಿತ ವಿಶೇಷಣ: ಮಾಡಿದ ಕೆಲಸ, ತಿಂದ ಅನ್ನ, ಚೆಲುವ ಶಂಕರ, ೭ ಡ್ಡ ಕುರಿ.

**ನೆನಪು:** ಮುಂದೆ ವಿಶೇಷ್ಯಗಳಿದ್ದಾಗ ಮಾತ್ರ ಇವು ವಿಶೇಷಣಗಳು. ಇಲ್ಲವಾದರೆ ಾ ದಂತ-ತದ್ಧಿತ ನಾಮಗಳು.

**ಸಮಸ್ತ ವಿಶೇಷಣ:** ಸೊಟ್ಟೆಡಕ ಕುಡಿಕೆ, ತಿಳಿಹಳದಿ ಹೂ, ನಾಲ್ಕಾರು ಜನರು.

**ಭಾವವಾಚಕನಾಮಗಳು:** ಕೋಪ (ಗುಣ), ನುಡಿತೆ (ಕ್ರಿಯೆ), ನಲ್ಮೆ ( ಭಾವ), ಭಾವವೆಂದರೆ ವಸ್ತುಗಳ ಗುಣ – ಕ್ರಿಯೆ – ಸ್ವಭಾವಗಳು.

ಕೃತ್‌ಭಾವನಾಮ: ಮಾಟ, ಒಲುಮೆ, ಬಿಡುವು, ತಾಳ್ಮೆ, ಸೇರಿಕೆ, ಬಿತ್ತಿಗೆ ಮುಂ.

**ತದ್ಧಿತಭಾವನಾಮ:** ತಳವಾರಿಕೆ, ಹುಡುಗತನ, ಜಾಣ್ಮೆ, ತಳಮಳಿಕೆ, ದೊಡ್ಡಿತೆ ಮ ುಂ.

ಸಮಸ್ತಭಾವನಾಮ: ಹಸಿಬಿಸಿತನ, ಕಳ್ಳಾಟ, ಬಲ್‌ಕೊಲೆ, ಮನೆವಾಳ್ತೆ ಮುಂ.

**ಸರ್ವನಾಮಗಳು:** ಪುರುಷವಾಚಕ ಸರ್ವನಾಮ: ನಾನು – ನಾವು, ನೀನು – ನೀವು, ತಾನು–ತಾವು, ಅವನು–ಅವಳು–ಅವರು, ಅದು–ಅವು, ಇವನು, ಇವಳು, ಇವರು ಇದು–ಇವು, ಆತನು, ಈತನು, ಆಕೆ, ಈಕೆ ಮುಂ.

ಸಂಬಂಧಸರ್ವನಾಮ: ಯಾವನು–ಅವನು, ಯಾವಳು-ಅವಳು, ಯಾರು–ಅವರು, ಯಾವುದು-ಅದು, ಯಾವುವು–ಅವು ಮುಂ.

ಸಾಮಾನ್ಯಸರ್ವನಾಮ: ಒಬ್ಬಾನೊಬ್ಬ, ಒಂದಾನೊಂದು, ಯಾರೊಬ್ಬರು, ಏನೊಂದು, ಹಾಗೊಬ್ಬ, ಹೀಗ್ಯೆವರು ಮುಂ.

ಪ್ರಶ್ನಸರ್ವನಾಮ: ಏನು, ಯಾವುದು, ಯಾರು, ಯಾವಳು, ಯಾವನು, ಏಕೆ ಮುಂ.

ಆತ್ಮಾರ್ಥಕಸರ್ವನಾಮ: ತಾನು, ತಾವು–ಗೌರವ ಅಪಹಾಸಗಳು ತೋರುವಾಗಲೂ ಈ ಸರ್ವನಾಮಗಳು ಬರುತ್ತಿವೆ.

ಗುರುಗಳೇ ತಾವು ದಯಮಾಡಿಸಬೇಕು. ತಾವು ಅರಣ್ಯ ಪಂಡಿತರಪ್ಪಾ !

**ವಿಶೇಷವಿಚಾರ:** ವಿಶೇಷ್ಯಗಳ ಹಿಂದಿನ ಅನುಬಂಧ ವಿಶೇಷಣಗಳಿಗೆ ನೇರವಾಗಿ ನಾ. ವಿ. ಪ್ರತ್ಯಯಗಳು ಸೇರುವುದಿಲ್ಲ. ಉತ್ತರ ವಿಶೇಷಣಗಳಿಗೆ ಮಾತ್ರ ಸಹಜವಾಗಿ ನಾ. ವಿ. ಪ್ರತ್ಯಯಗಳು ಸೇರುವುವು. ವಿಶೇಷಣನಾಮ ಮತ್ತು ಉತ್ತರ ವಿಶೇಷಣಗಳ ಮುಂದೆ ಲಿಂಗ ವಚನಗಳಿಗೆ ತಕ್ಕಂತೆ ಪ್ರಥಮ ಪುರುಷಸರ್ವನಾಮಗಳು ಆಗಮವಾಗುವುವು.

## — ಬಳಕೆ ಮತ್ತು ಕೇಳಿಕೆ —

೧. ಈ ಶಬ್ದಗಳ ಅರ್ಥಭೇದವನ್ನು ಹೇಳಿರಿ.
ದಯೆ, ಬೆಳ್ಳಿ, ಶುಕ್ರ, ಕುರೂಪಿ, ಮಣಿ, ಯಾರು, ಹೇಳಿಕೆ, ಎಷ್ಟು, ಗೋದಾವರಿ, ಉಗ್ರ, ಕರಿಗಾಲ, ಹುರಿಯೋಡು, ವಾಯುಗಾತಿ, ಬ್ರಾಹ್ಮಣಿ, ಎಲ್ಲಿದ, ಮಣ್ಣುಗ, ಎಂತಹ, ಮೆತ್ತನೆಯ, ಹುಳಿಯಾದ ಮುಂ.

೨. ಪ್ರಕೃತಿಗಳಲ್ಲಿ ಎಷ್ಟು ಬಗೆಗಳು ? ಉದಾಹರಿಸಿರಿ.

೩. ಪದವೆಂದರೇನು ? ಅವುಗಳಲ್ಲಿ ಎಷ್ಟು ಬಗೆಗಳು ?

೪. ನಾಮಪದವೆಂದರೇನು ? ಅವುಗಳಲ್ಲಿ ಯಾವ ಯಾವ ಅರ್ಥ ಭೇದಗಳು ಸೇರಿಕೊಳ್ಳುವುವು ? ಏಕೆ ? ಉದಾಹರಣ ಕೊಟ್ಟು ತಿಳಿಸಿರಿ.

೫. ವಿಶೇಷಣಗಳಿಗೆ ನೇರವಾಗಿ ನಾ. ವಿ. ಪ್ರತ್ಯಯಗಳು ಯಾವಾಗ ಸೇರುವುವು ?

## ೧೧. ನಾಮಪದಗಳ ನಿರೂಪಣ

**ಪ್ರಾತಿಪದಿಕ: ಚಂದ್ರನಿಗೆ, ಕೇಳುವವರಲ್ಲಿ, ಗೊಂದಲಿಗರನ್ನು, ಒಳ್ಳೆಯವನ.**

ನಾಮವಿಭಕ್ತಿ ಪ್ರತ್ಯಯಗಳನ್ನು ಹೊಂದಿರುವ ಮೂಲ ಶಬ್ದಗಳು ನಾಮ ಅಥವಾ ಪ್ರಾತಿಪದಿಕಗಳು.

**ಲಿಂಗಗಳು: ಪುಲ್ಲಿಂಗ:** ಗಂಡಸರ ಹೆಸರು: ಅಣ್ಣ, ಮಾತುಗ, ಭೀಮ, ಹೆಳವ ಮುಂ.

**ಸ್ತ್ರೀಲಿಂಗ:** ಹೆಂಗಸರ ಹೆಸರು: ಅಕ್ಕ, ಗೋವಳಿತಿ, ಕಮಲನಯನೆ, ಜಾಣೆ ಮುಂ.

**ನಪುಂಸಕಲಿಂಗ:** ಗಂಡಸು, ಹೆಂಗಸು ಹೊರತಾಗಿ ಉಳಿದೆಲ್ಲ ವಸ್ತುಗಳು– ಸ್ಥಿತಿ–ಗುಣ–ಕ್ರಿಯೆಗಳು. ಕಲ್ಲು, ಕೋಪ, ನಿರ್ದಯ, ಉಡುಗೆ ಮುಂ.

**ಉಭಯಲಿಂಗ: ಪುಂ– ಸ್ತ್ರೀಲಿಂಗ:** ಅವರು, ಇವರು, ಯಾರು, ಎಲ್ಲರು, ಹುಡುಗರು, ಜನರು ಮುಂ.

**ಪುಂ– ನಪುಂಸಕಲಿಂಗ:** ಆಳು, ಹುಡುಗ, ತೊತ್ತು, ವರ, ಜನ, ಸೂರ್ಯ, ಚಂದ್ರ, ಗ್ರಹಗಳು, ಋತುಗಳು ಮುಂತಾಗಿ.

**ಸ್ತ್ರೀ– ನಪುಂಸಕಲಿಂಗ:** ತೊತ್ತು, ವಧು, ಹುಡುಗಿ, ಭೂಮಿ, ಸಿರಿ, ಸರಸ್ವತಿ, ಗಂಗೆ, ದೇವತೆ ಮುಂ.

**ತ್ರಿಲಿಂಗ:** ನಾನು, ನೀನು, ನಾವು, ನೀವು, ಕೃದಂತನಾಮ, ಎಲ್ಲ ಬಗೆಯ ವಿಶೇಷಣ ನಾಮಗಳು.

**ವಿಶೇಷ ವಿಚಾರ:** ಜ್ಞಾನ – ಅಜ್ಞಾನಗಳ ಸ್ಪಷ್ಟತೆಯಿದ್ದಲ್ಲಿ ಒಂದೊಂದೇ ಲಿಂಗವಿರುತ್ತಿದೆ. ತಿರಸ್ಕಾರ, ಅಪಹಾಸ, ಗೌರವಗಳು ತೋರುವಲ್ಲಿ ಎರಡೆರಡು ಲಿಂಗಗಳು ತೋರುತ್ತಿವೆ. ಪ್ರಥಮ–ದ್ವಿತೀಯ ಸರ್ವನಾಮಗಳು ಎಲ್ಲ ಲಿಂಗಗಳಲ್ಲಿಯೂ ಬರುತ್ತಿವೆ.

**ವಚನಗಳು:** ಏಕವಚನ (ಒಂದರ ಎಣಿಕೆ) ಹನುಮಂತನಿಗೆ, ಕೆಟ್ಟವನನ್ನು, ತಿಳಿದವನಲ್ಲಿ, ಒಳ್ಳಿದನಿಂದ, ಕರಿಗೊರಲಿನಿಗೆ, ನಿನ್ನಿಂದ, ಅದಕ್ಕೆ, ಹುಲಿಯ ಮುಂ.

**ಬಹುವಚನ:** (ಒಂದಕ್ಕಿಂತ ಹೆಚ್ಚು ವಸ್ತುಗಳ ಎಣಿಕೆ) ಮುದುಕರಿಗೆ, ಹಾವುಗಾರರ, ಒಕ್ಕಲುಗಿತ್ತಿಯರು, ಎತ್ತುಗಳನ್ನು, ಎಲೆಅಡಕೆಗಳು, ನಮ್ಮೊಳಗೆ ಮುಂ.

**ಪದಗಳ ಆಗಮ:** ಪ್ರಾತಿಪದಿಕ ಮತ್ತು ನಾ. ವಿ. ಪ್ರತ್ಯಯಗಳು ನಡುವೆ ನ, ದ, ವ, ಳ, ಇನ, ಯ, ಅವನು, ಅವಳು, ಅದು ಮುಂತಾದ ಅಕ್ಷರಗಳು ಏಕವಚನದಲ್ಲಿ ಬರುವ ಆಗಮಗಳು; ಮತ್ತು ಆರು, ಗಳು, ಅಂದಿರು, ಅವು ಅವರು, ಅಂದಿರುಗಳು ಮುಂತಾದುವು ಬಹುವಚನದ ಆಗಮಪ್ರತ್ಯಯಗಳು.

**ವಿಶೇಷವಿಚಾರ: ಹನುಮಂತನು** ಬಹಳ **ಶೂರನು. ಅವನು** ಅನೇಕ **ರಾಕ್ಷಸರನ್ನು** ಕೊಂದನು. **ಚಿಗರೆಗಳು** ಬಲು **ಅಂಜುಗುಳಿಗಳು; ಅವು** ಸ್ವಲ್ಪ ಸಪ್ಪುಳಕ್ಕೂ ಬೆದರಿ ಓಡುತ್ತಿವೆ.

ವಿಶೇಷಣ, ಸರ್ವನಾಮಗಳು ಮೂಲನಾಮಗಳ ಲಿಂಗವಚನಗಳನ್ನೇ ಹೊಂದುತ್ತವೆ.

**ನಾಮವಿಭಕ್ತಿಗಳು: ವಿಭಕ್ತಿ–ಅರ್ಥ–ಪ್ರತ್ಯಯ:** ಪ್ರ. ವಿ. ಕರ್ತೃ – ಇಲ್ಲ. (ಉ); ದ್ವಿ – ವಿ. ಕರ್ಮ – ಅ ಅನ್ನು; ತೃ. ವಿ. ಸಾಧನ, ಇಂದ; ಚ. ವಿ. ಸಂಪ್ರದಾನ; ಗೆ ಇಗೆ ಕ್ಕೆ ಅಕ್ಕೆ; ಪಂ. ವಿ. ಅಪಾದಾನ, ಇಂದ; ಷ. ವಿ. ಸಂಬಂಧ, ಅ; ಸ. ವಿ ಅಧಿಕರಣ, ಅಲ್ಲಿ ಒಳಗೆ; ಸಂಬೋ. ವಿ. ಕರೆಯೋಣ, ಎ ಏ ಇರಾ.

**ವಿಶೇಷವಿಚಾರ: ವಿಭಕ್ತಿಪಲ್ಲಟ:** ಮನೆಮ**ನೆಗೆ** ಹಬ್ಬ – ಮನೆಮನೆ**ಯಲ್ಲಿ** ಹಬ್ಬ. ದಪ್ಪಕ್ಷರದ ಪ್ರತ್ಯಯಗಳನ್ನು ನೋಡಿರಿ. ಮನೆ ಮನೆ ಗೆ ಎಂಬಲ್ಲಿ **ಚತುರ್ಥೀವಿಭಕ್ತಿಯ** ಪ್ರತ್ಯಯವಿದೆ. ಆದರೆ ಅದು 'ಮನೆಮನೆಯಲ್ಲಿ' ಎಂಬಂತೆ **ಅಧಿಕರಣಾರ್ಥದಲ್ಲಿದೆ.** ಭಕ್ತ ದೇವ**ರನ್ನು** ವರವನ್ನು ಬೇಡಿದನು – ಭಕ್ತ ದೇವ**ರಿಂದ........**ಇಲ್ಲಿ **ಅನ್ನು** ಪ್ರತ್ಯಯ **ಅಪಾದಾನಾರ್ಥ**ದಲ್ಲಿ ಬಂದಿದೆ.

ಒಂದು ಪದದಲ್ಲಿ ತೋರುವ ನಾ. ವಿ. ಪ್ರತ್ಯಯ ಬೇರೊಂದು ವಿಭಕ್ತಿಯ ಅರ್ಥದಲ್ಲಿರುವುದು ವಿಭಕ್ತಿ ಪಲ್ಲಟ ಅಥವಾ ವಿಭಕ್ತಿ ಪರಿಣಾಮ.

ಪ್ರಥಮೆ, ಅಧಿಕರಣದಲ್ಲಿ – **ಹಗಲು** ನಿದ್ದೆ ಮಾಡಬೇಡ – **ಹಗಲಿನಲ್ಲಿ** ನಿದ್ದೆ ಮಾಡಬೇಡ. ಒಂದು ದಿವಸ ಏನಾಯಿತೆಂದರೆ- ಒಂದು **ದಿವಸದಲ್ಲಿ** ಏನಾಯಿತೆಂದರೆ.

ದ್ವಿತೀಯೆ ಅಪಾದಾನದಲ್ಲಿ – ಗೋವಳಿತಿ **ಹಸುವನ್ನು** ಹಾಲನ್ನು ಕರೆದಳು – **ಹಸುವಿನಿಂದ;** ಕುಂತಿ **ಕರ್ಣನನ್ನು** ವಚನವನ್ನು ಬೇಡಿದಳು– **ಕರ್ಣನಿಂದ.**

ದ್ವಿತೀಯೆ, ಸಂಪ್ರದಾನದಲ್ಲಿ; ಗುರು ಶಿಷ್ಯನನ್ನು ಓದಿಸಿದನು – ಶಿಷ್ಯನಿಗೆ

ತೃತೀಯೆ; ಅಧಿಕರಣದಲ್ಲಿ – ಜಾತಿಯಿಂದ ಬ್ರಾಹ್ಮಣ – ಜಾತಿಯಲ್ಲಿ

ಚತುರ್ಥೀ ಕರ್ಮಾರ್ಥದಲ್ಲಿ – ಆಕಳು ಮನೆಗೆ ಮುಟ್ಟಿತು – ಮನೆಯನ್ನು

ಚತುರ್ಥೀ ಅಧಿಕರಣದಲ್ಲಿ – ಊರೂರಿಗೆ ಹನುಮಪ್ಪ – ಊರೂರಲ್ಲಿ

,, ಸಂಬಂಧದಲ್ಲಿ – ಮನೆಗೆ ಯಜಮಾನ – ಮನೆಯ

,, ಅಪಾದಾನದಲ್ಲಿ – ಮನೆಗೆ ಬಹಳ ದೂರ – ಮನೆಯಿಂದ

ಸಪ್ತಮೀ, ಸಾಧನೆಯಲ್ಲಿ – ಕಣ್ಣಲ್ಲಿ ಕಂಡನು – ಕಣ್ಣಿಂದ

## — ಬಳಕೆ ಮತ್ತು ಕೇಳಿಕೆ —

೧. ಕೆಳಗಿನ ಶಬ್ದಗಳ–ಲಿಂಗ–ವಚನ ವಿಭಕ್ತಿಗಳನ್ನು ಹೇಳಿರಿ.

ನಮ್ಮ ಗುರುಗಳು ಒಳ್ಳೆಯವರು. ಅವರು ನಮಗೆ ಪಾಠಗಳನ್ನು ಚೆನ್ನಾಗಿ ಹೇಳುತ್ತಾರೆ. ಕೇಳಿದವರಿಂದ, ತುಂಟರ, ನಾಲ್ಕರಲ್ಲಿ, ಒಂದೊಂದಕ್ಕೆ, ಅಣ್ಣಂದಿರನ್ನು, ಮಕ್ಕಳಿಂದ, ನಮ್ಮೊಳಗೆ, ಯಾವಳಿಗೆ, ತಮ್ಮನ್ನು, ದೊರೆಗಳೇ.

೩. ಕೆಳಗಿನ ವಿಭಕ್ತಿಗಳ ಪಲ್ಲಟ ಅರ್ಥವನ್ನು ಹೇಳಿರಿ.
ಮನೆಯೊಡೆಯನಿಗೆ ಬೇಡಿದನು, ಬಾಣದ ಹೊಡೆತ, ಕಾಲೊಳ್ ನಡೆದಪಿರಿ, ವಧೂವರರು ಕೈಗೆಕೈಕೊಟ್ಟರು. ಮಾತು ಆಡಿದರೆ ಮುತ್ತಿನಂತೆ ಇರಬೇಕು. ಎಲ್ಲರೂ ಸುಖದ ಪಾಲುಗಾರರೇ.

೩. ಪುಲ್ಲಿಂಗ ಸ್ತ್ರೀಲಿಂಗ ಪದಗಳು ನಪುಂಸಕಲಿಂಗದಲ್ಲಿ ಬರುವುದು ಹೇಗೆ? ಉದಾಹರಣೆಗಳಿಂದ ವಿವರಿಸಿರಿ.

೪. ನಪುಂಸಕಲಿಂಗದ ಪದಗಳು ಪುಲ್ಲಿಂಗ ಸ್ತ್ರೀಲಿಂಗಗಳಲ್ಲಿ ಹೇಗೆ ಬರುವುವು? ತಿಳಿಸಿರಿ.

೫. ಏಕವಚನದ ಆಗಮ ಪ್ರತ್ಯಯಗಳಾವುವು? ಎರಡು ಉದಾಹರಣೆ ಕೊಡಿರಿ.

೬. ತ್ರಿಲಿಂಗದ ಪದಗಳು ಯಾವುವು? ಹೇಗೆ?

೭. ಏಕವಚನ ಪದವನ್ನು ಬಹುವಚನಾಂತವಾಗಿ ಉಪಯೋಗಿಸುವ ಪ್ರಸಂಗಗಳಾವುವು? ಉದಾಹರಿಸಿರಿ.

೮. ಪ್ರಾತಿಪದಿಕ ಎಂದರೇನು? ಅವು ಯಾವುವು?

೯. ವಿಭಕ್ತಿ ಪಲ್ಲಟವನ್ನು ಎರಡು ಉದಾಹರಣೆಗಳಲ್ಲಿ ತೋರಿಸಿರಿ.

## ೧೨. ಕ್ರಿಯಾಪದಗಳು

**ಕ್ರಿಯಾಪದವೆಂದರೇನು?** ವಾಕ್ಯದಲ್ಲಿ ಕರ್ತೃವಿನ ಕೆಲಸದ ಪೂರಾ ಕಲ್ಪನೆಯನ್ನು ಕೊಡುವ ಮತ್ತು ಮಾತನ್ನು ಮುಗಿಸುವ ಪದವೇ ಕ್ರಿಯಾಪದ. ಈ ಪದದ ಅರ್ಥ ಪೂರ್ಣವಾಗಿಯುವುದಕ್ಕೆ ಪ್ರಥಮಾ, ದ್ವಿತೀಯಾ, ತೃತೀಯಾ, ಚತುರ್ಥೀ, ಪಂಚಮೀ, ಸಪ್ತಮೀ ವಿಭಕ್ತಿಗಳು ಸಂಬಂಧವಾಗುತ್ತಿವೆ.

**ಧಾತು:** ಕ್ರಿಯಾಪದದ ಮೂಲ ರೂಪವನ್ನು ಧಾತುವೆನ್ನುವರು.
ಕೊಡು, ಇರಿಸು, ತಲೆಬಾಗು, ನಡೆತರು ಮುಂ.

**ಧಾತುಭೇದ:** ಸಹಜಧಾತು: ಹಾಡು, ನಡೆ, ಕೇಳು, ತರು, ಕಟೆ ಮುಂ.

ಇವುಗಳಲ್ಲಿ ಬೇರೆ ಪ್ರತ್ಯಯಗಳಾಗಲಿ ಶಬ್ದಗಳಾಗಲಿ ಕೂಡಿಲ್ಲ. ಆದುದರಿಂದ ಸಹಜಭವಾ ಸಿದ್ಧ ಧಾತುಗಳು. ರೂಢ ಧಾತುಗಳೆಂದೂ ಇವುಗಳನ್ನು ಹೇಳಬಹುದು.

**ಸಾಧಿತಧಾತು:** ನಡೆಸು, ತಲ್ಲಣಿಸು, ಸೊಗಯಿಸು, ಅನುಭವಿಸು, ಕಳುಪು, ಚ್ಚು, ಕೈಮುಗಿ, ಕಾಲು ಬೀಳು, ತಲೆವಾಗು ಮುಂ.

ಇವು ಕೃತ್ಪ್ರತ್ಯಯ, ತದ್ಧಿತಪ್ರತ್ಯಯ, ಕ್ರಿಯಾಸಮಾಸಗಳಿಂದ ಹುಟ್ಟಿದ ಸಾಧಿತ ಧಾತುಗಳು. ಅವುಗಳನ್ನು ಗುರುತಿಸಿರಿ.

**ಸಂಯುಕ್ತ ಧಾತು:** ಹೋಗಿಬರು, ತಿಂದು ಹಾಕು, ಬರೆದುಕೊಡು; ಕರೆತರು, ಡಾಡು, ನಡೆಯಾಡು; ಬೇಕೆನಿಸು, ಸಾಕಾಗು, ಬೇಡವೆನ್ನು ಮುಂ.

**ಅಕರ್ಮಕ ಧಾತು:** ಪ್ರಯತ್ನದಿಂದ ಫಲವು ದೊರೆಯುತ್ತಿದೆ.

ಈ ವಾಕ್ಯದಲ್ಲಿ ಕರ್ಮಪದವಿಲ್ಲ. ದೊರೆ ಇದು ಅಕರ್ಮಕ ಧಾತು. ಹೀಗೆಯೇ - ಆಗು, ಹೇಕರಿಸು, ಕಳವಳಿಸು, ತೂಗಾಡು ಮುಂ.

**ಸಕರ್ಮಕ ಧಾತು:** ಪ್ರಯತ್ನವು ಫಲವನ್ನು ಕೊಡುತ್ತಿದೆ.

ಈ ವಾಕ್ಯದಲ್ಲಿ ಕರ್ಮಪದವಿದೆ – ಕೊಡು ಸಕರ್ಮಕ ಧಾತು.

ಹೀಗೆಯೇ – ಮಾಡು; ನಡೆಸು, ಅನುಭವಿಸು, ಕರೆತರು ಮುಂ.

**ನೆನಪು:** ಈ ಅಕರ್ಮಕ – ಸಕರ್ಮಕ ವಿಭಾಗಗಳು ಸಿದ್ಧ – ಸಾಧಿತ – ಸಂಯುಕ್ತ ಧಾತುಗಳಲ್ಲಿಯೂ ತೋರುತ್ತಿವೆ. ಉದಾಹರಣಗಳನ್ನು ಗಮನಿಸಿರಿ.

**ಕ್ರಿಯಾಪದ ಹೇಗಾಗುತ್ತಿದೆ?** ಧಾತುಗಳ ಮುಂದೆ ಅರ್ಥಕ್ಕೆ ಸರಿಯಾಗಿ ಕ್ರಿಯಾ ವಿಭಕ್ತಿ ಪ್ರತ್ಯಯಗಳು ಸೇರಿ ಕ್ರಿಯಾಪದಗಳಾಗುತ್ತಿವೆ.

**ಅರ್ಥಗಳೆಷ್ಟು?:** ಸಂಭವಾರ್ಥ, ನಿಷೇಧಾರ್ಥ, ವಿಧ್ಯರ್ಥ, ಸಂಶಯಾರ್ಥ ಅಥವಾ ಸಂಭಾವನಾರ್ಥ ಎಂದು ನಾಲ್ಕು ಬಗೆ.

**ಸಂಭವಾರ್ಥದಲ್ಲಿ:** ಕ್ರಿಯಾ ಸಂಭವದ ನಿಶ್ಚಯವನ್ನು ಹೇಳುವ ಕಾಲವಾಚಕ ಕ್ರಿಯಾಪದಗಳು ಸಂಭವಾರ್ಥದ ಕ್ರಿಯಾಪದಗಳು. ಇವುಗಳಲ್ಲಿ ಭೂತ – ವರ್ತಮಾನ – ಭವಿಷ್ಯತ್ತು ಎಂದು ಮೂರು ಕಾಲಗಳಿವೆ.

**ಭೂತ ಕ್ರಿಯಾಪದಗಳು:** ಕ್ರಿಯೆ ನಡೆದು ಮುಗಿದ ಕಾಲದುವು ಭೂತಕಾಲ ಕ್ರಿಯಾಪದಗಳು.

**ಪ್ರತ್ಯಯಗಳು:** ಪ್ರ. ಪು. ಎನು, ಎವು; ದ್ವಿ. ಪು. ಎ, ಇರಿ; ತೃ. ಪು. (ಪುಂ ಸ್ತ್ರೀ) ಅನು, ಅಳು, ಅರು; (ನ. ಲಿಂ.) ಇತು, ಅವು – ಉವು.

**ಸಿದ್ಧರೂಪಗಳು:** ನುಡಿ – ನುಡಿದೆನು, ನುಡಿದಿರಿ, ನುಡಿಯಿತು, ನುಡಿದರು ಮುಂ.

**ಆಗಮ:** ಭೂತಕಾಲವನ್ನು ತೋರಿಸಲು ಧಾತುಗಳ ಮುಂದೆ 'ದ – ಇದ' ಆಗಮ ಪ್ರತ್ಯಯ ಸೇರುತ್ತಿವೆ. ಇವು **ಸಹಜಭೂತ** ಕ್ರಿಯಾಪದಗಳು.

**ಪೂರ್ಣಭೂತ:** ನುಡಿದಿದ್ದೆನು, ನುಡಿದಿದ್ದಳು, ನುಡಿದಿದ್ದವು.

ಸಹಜ ಭೂತಕಾಲಕ್ಕಿಂತ ಹಿಂದಿನಕಾಲ, ಎಂಬರ್ಥದಲ್ಲಿ ಪೂರ್ಣಭೂತ ಕ್ರಿಯಾ ಪದಗಳು ಬರುವುವು. ಇವುಗಳಲ್ಲಿ, ಧಾತುವಿನ ಮುಂದೆ ಭೂತಕಾಲದ 'ದ' ಆಗಮ, ಅದರ ಮುಂದೆ 'ಇರು' ಧಾತುವಿನ ಸಹಜ ಭೂತ ಕ್ರಿಯಾಪದಗಳು ಬರುವುವು. ಹೇಗೆ?........

**ಅಪೂರ್ಣಭೂತ:** ನುಡಿಯುತ್ತಿದ್ದನು, ನುಡಿಯುತ್ತಿದ್ದಿರಿ, ನುಡಿಯುತ್ತಿದ್ದವು. ಸಹಜ ಭೂತಕ್ಕಿಂತ ತುಸು ಮುಂದಿನ ಕಾಲದುವು ಅಪೂರ್ಣಭೂತ ಕ್ರಿಯಾಪದಗಳು. ಇವುಗಳಲ್ಲಿ ಧಾತುವಿನ ಮುಂದೆ ವರ್ತಮಾನ ಕಾಲದ ಉತ್ತ ಆಗಮ, ಮುಂದೆ ಇರು ಧಾತುವಿನ ಸಹಜಭೂತ ಕ್ರಿಯಾಪದಗಳು ಬರುವುವು.

**ರೀತಿಭೂತ:** ನುಡಿದಿರುತ್ತಿದ್ದೆವು, ನುಡಿಯುತ್ತಿರುತ್ತಿದ್ದೆವು ಮುಂ.

ಭೂತಕ್ರಿಯಾಪದಗಳಲ್ಲಿ ರೀತಿ ಅಥವಾ ರೂಢಿಯನ್ನು ತೋರಿಸುವುವು ರೀತಿಭೂತ ಕ್ರಿಯಾಪದ. ಇವುಗಳಲ್ಲಿ, ಧಾತುಗಳ ಮುಂದಿನ ದ ಅಥವಾ ಉತ್ತ ಆಗಮಗಳ ಮುಂದೆ ಇರು ಧಾತುವಿನ ಅಪೂರ್ಣಭೂತ ಕ್ರಿಯಾಪದಗಳು ತೋರುವುವು.

**ವರ್ತಮಾನ ಕ್ರಿಯಾಪದ:** ಕ್ರಿಯೆ ನಡೆಯುತ್ತಿರುವ ಕಾಲವನ್ನು ಹೇಳುವುವು ವರ್ತಮಾನ ಕ್ರಿಯಾಪದಗಳು.

**ಪ್ರತ್ಯಯಗಳು:** ಪ್ರ. ಪು. ಏನೆ, ಏವೆ; ದ್ವಿ. ಪು. ಈ, ಈಯೆ, ಈರಿ; ತೃ. ಪು. ಪುಂ. ಸ್ತ್ರೀ.) ಆನೆ, ಆಳೆ, ಆರೆ; (ನ. ಲಿಂ.) ಅದೆ, ಇದೆ – ಅವೆ, ಇವೆ.

**ಸಿದ್ಧರೂಪಗಳು:** ಕೂಡು ಧಾತು – ಕೂಡುತ್ತೇನೆ, ಕೊಡುತ್ತೀರಿ, ಕೂಡುತ್ತಿದೆ, ಕೂಡುತ್ತದೆ, ಕೊಡುತ್ತಿವೆ, ಕೊಡುತ್ತವೆ ಮುಂ.

ಇವು ಸಹಜ ವರ್ತಮಾನ ಕ್ರಿಯಾಪದಗಳು. ಇಲ್ಲಿ 'ಉತ್ತ' ಆಗಮ ಮುಖ್ಯ.

**ಪೂರ್ಣವರ್ತಮಾನ:** ಕೂಡಿದ್ದೇವೆ, ಕೂಡಿದ್ದೀರಿ, ಕೂಡಿದ್ದಿತು, ಕೂಡಿದ್ದುವು.

ಸಹಜ ವರ್ತಮಾನಕ್ಕಿಂತ ತುಸು ಹಿಂದಿನ ಕಾಲದ ಸೂಚನೆಯ ಕ್ರಿಯಾಪದಗಳು ಪೂರ್ಣವರ್ತಮಾನ ಕ್ರಿಯಾಪದಗಳು. ಇವುಗಳಲ್ಲಿ ಮುಖ್ಯ ಧಾತುವಿನ ಭೂತಕೃದಂತಾವ್ಯಯಗಳ ಮುಂದೆ, ಇರು ಧಾತುವಿಗೆ ದ ಆಗಮ ಸಹಿತವಾದ ವರ್ತಮಾನ ಕ್ರಿಯಾರೂಪಗಳು ಬರುತ್ತಿವೆ.

**ಅಪೂರ್ಣ ವರ್ತಮಾನ:** ಕೊಡುತ್ತಿದ್ದೇನೆ, ಕೊಡುತ್ತಿದ್ದೀ, ಕೊಡುತ್ತಿವೆ ಮುಂ.

ಸಹಜ ವರ್ತಮಾನ ಕಾಲಕ್ಕಿಂತ ಸ್ವಲ್ಪ ಮುಂದಿನ ಕಾಲವನ್ನು ಸೂಚಿಸುವುವು ಅಪೂರ್ಣ ವರ್ತಮಾನ ಕ್ರಿಯಾಪದಗಳು. ಇವುಗಳಲ್ಲಿ ಮೂಲ ಧಾತುವಿನ ಮುಂದೆ ಉತ್ತ ಆಗಮ, ಮುಂದೆ ಇರು ಧಾತುವಿನ ಪೂರ್ಣವರ್ತಮಾನ ಕ್ರಿಯಾಪದಗಳು ಸೇರುತ್ತಿವೆ.

**ರೀತಿವರ್ತಮಾನ:** ಕೂಡಿರುತ್ತೀ, ಕೊಡುತ್ತಿರುತ್ತೀ, ಕೂಡಿರುತ್ತಿದೆ, ಕೊಡುತ್ತಿರುತ್ತಿದೆ. ರೀತಿವರ್ತಮಾನ ಕ್ರಿಯಾಪದಗಳಲ್ಲಿ— ಧಾತುವಿನ ಭೂತ – ವರ್ತಮಾನ ಕೃದಂತಾವ್ಯಯಗಳ ಮುಂದೆ ಇರು ಧಾತುವಿನ ಸಹಜ ವರ್ತಮಾನ ಕ್ರಿಯಾಪದಗಳು ಹೊಂದಿಕೊಳ್ಳುತ್ತಿವೆ.

**ಭವಿಷ್ಯತ್ ಕ್ರಿಯಾಪದ: ಪ್ರತ್ಯಯಗಳು:** ಪ್ರ. ಪು. ಎನು, ಎವು; ದ್ವಿ. ಪು. ಎ– ಇ, ಇರಿ; ತೃ. ಪು. (ಪುಂ. ಸ್ತ್ರೀ.) ಅನು, ಆಳು, ಅರು, ಅದು – ಉದು, ಅವು – ಉವು.

**ಭವಿಷ್ಯತ್ ರೂಪುಗಳು:** ಬೇಡು ಧಾತು – ಬೇಡುವನು, ಬೇಡಿರುವನು, ಬೇಡುತ್ತಿರುವನು, ಬೇಡಲಿರುವನು ಮುಂ– ಭವಿಷ್ಯತ್ ಕಾಲಕ್ಕೆ ಉವ ಅಥವಾ 'ವ' ಆಗಮ ಮುಖ್ಯ ಲಕ್ಷಣ. ಆದರೆ ಮುಂದಿನ ಕಾಲದ ಕ್ರಿಯಾಪದಗಳಲ್ಲಿ ಪೂರ್ಣ ಅಪೂರ್ಣಗಳನ್ನು ಹೇಳುವುದು ಸೂಕ್ತವಾಗಿಲ್ಲ. ಆದರೂ ಮೇಲಿನ ರೂಪುಗಳಿಂದ ಆ ಆ ಆಗಮಗಳ ಕಲ್ಪನೆ ಮಾಡಿಕೊಂಡರೆ ಸಾಕು.

**ನಿಷೇಧಾರ್ಥಕ ಕ್ರಿಯಾಪದಗಳು: ಪ್ರತ್ಯಯಗಳು:** ಪ್ರ. ಪು. ಎನು, ಎವು; ದ್ವಿ. ಪು. ಎ, ಅರಿ; ತೃ. ಪು. (ಪುಂ. ಸ್ತ್ರೀ.) ಅನು, ಅಳು, ಅರು; (ನ. ಲಿಂ.) ಅದು, ಅವು.

**ಸಿದ್ಧರೂಪುಗಳು:** ಬರೆ–ಬರೆಯೆನು, ಬರೆಯಿರಿ, ಬರೆಯಳು, ಬರೆಯವು ಮುಂ.

ಇವು 'ಕ್ರಿಯೆ ನಡೆಯುವುದಿಲ್ಲ' ಎಂಬ 'ನಿಷೇಧ' ಅರ್ಥದ ವಿಧಾನ ಕ್ರಿಯಾಪದಗಳು. ಇಲ್ಲಿ ಯಾವ ಆಗಮವೂ ಇಲ್ಲ. ನೇರವಾಗಿ ಧಾತುವಿಗೆ ಕ್ರಿ. ವಿ. ಪ್ರ. ಗಳು ಸೇರುತ್ತಿವೆ.

**ವಿಧ್ಯರ್ಥ ಕ್ರಿಯಾಪದಗಳು: ಪ್ರತ್ಯಯಗಳು:** ಪ್ರ. ಪು. ಎ, ಅ; ದ್ವಿ. ಪು. ಧಾತುವಿನ ಮೂಲರೂಪ; ಇರಿ; ತೃ. ಪು. (ತ್ರಿಲಿಂಗ) ಅಲಿ, ಅಲಿ.

**ಸಿದ್ಧರೂಪುಗಳು:** ಹೋಗುವೆ, ಹೋಗುವಾ, ಹೋಗು, ಹೋಗಿರಿ, ಹೋಗಲಿ.

ಇವು ವಿಧಿ ಕ್ರಿಯಾಪದಗಳು. 'ವಿಧಿ' ಎಂದರೆ ಅಪ್ಪಣೆ, ಒಪ್ಪಿಗೆ, ಹರಕೆ, ಹಾರೈಕೆ. ಇವುಗಳಲ್ಲಿ ಗೊತ್ತಾದ ಆಗಮ ಪ್ರತ್ಯಯವಿಲ್ಲ.

**ಸಂಶಯ ಅಥವಾ ಸಂಭಾವನಾ ಕ್ರಿಯಾಪದಗಳು: ಪ್ರತ್ಯಯಗಳು:** ಪ್ರ. ಪು. ಏನು, ಏವು; ದ್ವಿ. ಪು. ಈ, ಈಯೆ, ಈರಿ; ತೃ. ಪು. (ಪು. ಸ್ತ್ರೀ.) ಆನು, ಆಳು, ಆರು, (ನ. ಲಿಂ) ಈತು, ಆವು.

**ಸಿದ್ಧರೂಪುಗಳು:** ನಲಿ: ನಲಿವೇವು, ನಲಿದೀಯೆ, ನಲಿದಾರು, ನಲಿದೀತು ಮುಂ.

ಈ ಕ್ರಿಯಾಪದಗಳಲ್ಲಿ ಕ್ರಿಯೆಯ ಬಗೆಗ ಸಂಶಯ ಅಥವಾ ಸಂಭಾವನೆ ತೋರುವುದು. ಇವುಗಳಲ್ಲಿ 'ದ' ಆಗಮ ಪ್ರತ್ಯಯ ತೋರುವುದು.

## — ಬಳಕೆ ಮತ್ತು ಕೇಳಿಕೆ —

೧. **ಕೆಳಗಿನ ಕ್ರಿಯಾಪದಗಳ ಹೆಸರನ್ನು ಹೇಳಿರಿ.**
**ಬೇಸಗೆ ಮುಗಿಯಿತು; ಒಕ್ಕಲಿಗರು ಹೊಲಗಳನ್ನು ಹಸನು ಮಾಡಿದ್ದರು, ಮಾಡುತ್ತಿದ್ದರು. ಮಳೆಯ ದಾರಿಯನ್ನು ಕಾಯುತ್ತಾರೆ. ಪ್ರತಿ ವರ್ಷ ಈಗಾಗಲೇ ಮಳೆ ಬಂದಿರುತ್ತಿದ್ದಿತು, ಬರುತ್ತಿರುತ್ತಿದ್ದಿತು. ಈ ಸಲ ಇನ್ನೂ ಬಾರದು. ಬೇಗನೆ ಮಳೆ ಸುರಿಯಲಿ, ಎಂದು ಬೇಡಿಕೊಳ್ಳುತ್ತಿದ್ದಾರೆ. ಮೋಡಗಳು ತೇಲುತ್ತಿವೆ. ಮಳೆ ಬಂದೀತು, ಎಂದು ನಂಬುತ್ತಿದ್ದಾರೆ. ಒಕ್ಕಲಿಗನಿಗೆ ಒಳಿತಾಗಲಿ ಎಂದು ಹಾರೈಸುವಾ.**

೨. **ತುಳಿ ಧಾತುವಿನ ಎಲ್ಲ ಅರ್ಥ–ಕಾಲಗಳ ಒಂದೊಂದು ರೂಪವನ್ನು ಕೊಡಿರಿ.**

೩. **ಕ್ರಿಯಾಪದಗಳಲ್ಲಿ ಎಷ್ಟು ಬಗೆಯ ಅರ್ಥಗಳು ? ಯಾವವು ?**

೪. **ಕಾಲಾರ್ಥಗಳಲ್ಲಿ ಎಷ್ಟು ಪ್ರಕಾರಗಳು ? ಯಾವವು ? ಉದಾಹರಿಸಿರಿ.**

೫. **ಭೂತಕಾಲದಲ್ಲಿ ಪೂರ್ಣ–ಅಪೂರ್ಣ–ರೀತಿ ಕ್ರಿಯಾಪದಗಳು ಹೇಗಾಗುವುವು ? ಹಾರು ಧಾತುವಿನ ಎಲ್ಲ ಸಿದ್ಧ ರೂಪಗಳನ್ನು ತಿಳಿಸಿರಿ.**

## ೧೩. ಅವ್ಯಯ ಪದಗಳು

**ಅವ್ಯಯು:** ಎಲ್ಲ ಬಗೆಯ ವಾಕ್ಯಗಳಲ್ಲಿಯೂ ಲಿಂಗವಚನ ವಿಭಕ್ತಿಗಳ ವಿಕಾರವಿಲ್ಲದೆ ಮೂಲ ರೂಪದಲ್ಲಿಯೇ ಇರುವ ಶಬ್ದಗಳು ಅವ್ಯಯಗಳು, ಅಥವಾ ಅವ್ಯಯಪದಗಳು.

**ಅವ್ಯಯ ಪ್ರಕಾರಗಳು: ಕ್ರಿಯಾವಿಶೇಷಣ ಅವ್ಯಯು:** ಕ್ರಿಯಾಪದವನ್ನು ಬಣ್ಣಿಸುವ ಅವ್ಯಯಗಳು ಕ್ರಿಯಾ ವಿಶೇಷಣ ಅವ್ಯಯಗಳು.

ನಿನ್ನೆ ಎತ್ತೆತ್ತಲೂ ಮಳೆ ಒಳಿತಾಗಿ ಸುರಿಯಿತು. ಇವರಲ್ಲಿ ನಿನ್ನೆ – **ಕಾಲವನ್ನು**, ಎತ್ತೆತ್ತಲೂ – **ಸ್ಥಳವನ್ನು**, ಒಳಿತಾಗಿ – **ರೀತಿಯನ್ನು** ಹೇಳಿ ಕ್ರಿಯೆಯನ್ನು ಬಣ್ಣಿಸುವ ಅವ್ಯಯಪದಗಳಾಗಿವೆ.

**ರೀತಿವಾಚಕ–** ಕ್ರಿ. ವಿ. ಅ: ಚೆನ್ನಾಗಿ, ಬಲವಾಗಿ, ಹಾಗೆ, ಹೀಗೆ, ಸುಮ್ಮನೆ, ಬೆಚ್ಚಗೆ, ತಣ್ಣಗೆ, ಮೆತ್ತಗೆ, ಅಂತು, ಇಂತು ಮುಂ.

**ಕಾಲವಾಚಕ–** ಕ್ರಿ. ವಿ. ಅ: ಆಗ, ಎಂದು, ಅಂದು, ನಿನ್ನೆ, ನಾಳೆ, ಬೆಳಗಿಗೆ, ನಿರಂತರ, ತರುವಾಯ, ಬಳಿಕ, ಬೈಗು, ಮೊದಲು, ಹೊತ್ತಾರೆ ಮುಂ.

**ಸ್ಥಳವಾಚಕ–** ಕ್ರಿ. ವಿ. ಅ: ಹಿಂದೆ, ಮುಂದೆ, ಮೇಲೆ, ಸುತ್ತು, ಎತ್ತೆತ್ತ, ಆಚೆ, ಈಚೆ, ಹೊರಗು, ಒಳಗು, ಅಲ್ಲಿ, ಇಲ್ಲಿ, ಎಲ್ಲಿ, ಅತ್ತ, ಇತ್ತ ಮುಂ.

**ಅನುಕರಣ ಅವ್ಯಯುಗಳು:** ಸರಸರ, ಸಳಸಳ, ಕುಲುಕುಲು, ಛಟಲ್ಲನೆ, ಪಟಪಟ, ತಿಠ್ರನೆ, ಗಣಗಣ, ಜುಳುಜುಳು, ಭುಸುಭುಸು, ಮಿಕಿಮಿಕಿ ಮುಂ.

**ಸಮುಚ್ಚಾಯಕ ಅವ್ಯಯು:** ಆದುದರಿಂದ, ಹೇಗೆಂದರೆ, ಮತ್ತು, ಅಲ್ಲದೆ, ಆದರೆ, ಏಕೆಂದರೆ, ಏನೆಂದರೆ ಮುಂ.

ವಾಕ್ಯಗಳನ್ನಾಗಲಿ, ಪದಗಳನ್ನಾಗಲಿ ಕೂಡಿಸುವುವು ಸಮುಚ್ಚಾಯಕ ಅವ್ಯಯುಗಳು.

**ಭಾವಬೋಧಕ ಅವ್ಯಯು:** ಅಯ್ಯೋ, ಆಹಾ, ಛೀ, ಚೀ, ಹೆಹೇ, ಅಹಹ, ಆಹಾ ಮುಂ.

**ಸಂಬೋಧಕ ಅವ್ಯಯು:** ಏ, ಅಣ್ಣಾ, ಎಲಾ ಹುಡುಗಾ, ಎಲೆ ತಾಯೇ ಮುಂ.

**ವಿಭಕ್ತಿ ಅವ್ಯಯು:** ಸಲುವಾಗಿ, ಸಂಗಡ, ಓಸುಗ, ಮೂಲಕ ಮುಂತಾಗಿ.

ನಾಮವಿಭಕ್ತ್ಯಂತ ಪದಗಳ ಮುಂದೆ ಬರುವ ಅವ್ಯಯಗಳು.

ಹೇಗೆ – ಭೀಮನ ಸಲುವಾಗಿ, ಸೀತೆಗೋಸುಗ ಮುಂ.

**ಕ್ರಿಯಾರೂಪ ಅವ್ಯಯು:** ಬೇಕು, ಬೇಡ, ಅಲ್ಲ, ಇಲ್ಲ, ಸಾಕು, ಉಂಟು, ಬಾರದು, ಕೂಡದು ಮುಂ.

**ನಿಪಾತ ಅವ್ಯಯು:** ಏ, ಓ, ಊ ಮುಂ. ಅವನೇ ಕೇಳಿದ, ಗಂಗನೂ ಬರಲಿ, ಕೇಳಿದನೋ ಮುಂ.

**ಕೃದಂತಾವ್ಯಯ:** ತಂದು, ಹೊರುತ್ತ, ಕಲಿಯದೆ, ಕೇಳಲು, ನಗಲಿಕ್ಕೆ, ಹೊಡೆದರೆ ಮುಂ.

**ತದ್ಧಿತಾವ್ಯಯ:** ಮಗನಂತೆ, ಜಾಣನಹಾಗೆ, ಮನೆಯವರೆಗೆ, ಸಂಜೆಯತನಕ, ತಂಗಿಗೋಸುಗ, ಗೆಳೆಯನಿಗೋಸ್ಕರ, ಕುತ್ತಿಗೆಮಟ್ಟ ಮುಂ.

## — ಬಳಕೆ ಮತ್ತು ಕೇಳಿಕೆ —

೧. ಕೆಳಗಿನ ಅವ್ಯಯಗಳ ಭೇದಗಳನ್ನು ಹೇಳಿರಿ.

ಜೋಳದ ಬೆಳೆ ಬಲವಾಗಿ ಬಂದಿತ್ತು. ನೋಡಿದರೆ ಹರುಷ ಉಕ್ಕಿ ಹರಿಯುತ್ತಿತ್ತು. ಗಾಳಿಗೊಮ್ಮೆ ಸರಸರ ಸಪ್ಪಳು ಮಾಡುವ ದಂಟುಗಳು . ಬರಬೇಕು ಬರಬೇಕು ಎಂದು ಹಾದಿಕಾರರನ್ನು ಕರೆಯುತ್ತಿದ್ದವೋ ಏನೋ ! ಆಹಾ ! ಎಂತಹ ಸೊಗಸು ತೆನೆಗಳದು. ಮುತ್ತಿನ ಚೆಂಡುಗಳಂತೆ ಕಂಗೊಳಿಸುತ್ತಿದ್ದವು. ಒಂದನ್ನಾದರೂ ಮುರಿದುಕೊಳ್ಳದೆ ಮನಸ್ಸಿಗೆ ನೆಮ್ಮದಿಯಿಲ್ಲ; ಮತ್ತು ಮುಂದೆ ಸಾಗಾಟವೂ ಇಲ್ಲ.

೨. ಅವ್ಯಯವೆಂದರೇನು ? ಅದು ಶಬ್ದವೋ ಪದವೋ ? ಸಿದ್ಧಮಾಡಿರಿ.

೩. ರೀತಿವಾಚಕ ಕ್ರಿಯಾವಿಶೇಷಣಗಳಿಗೂ ಅನುಕರಣವಾಚಕಗಳಿಗೂ ಭೇದವೇನು ? ದೃಷ್ಟಾಂತಗಳಿಂದ ಸ್ಪಷ್ಟ ಮಾಡಿರಿ.

೪. ಅವ್ಯಯ ಕ್ರಿಯಾಪದಗಳು ಯಾವುವು ? ಅವು ಹೇಗೆ ಹುಟ್ಟಿರಬೇಕು ?

೫. ಅವ್ಯಯಗಳಲ್ಲಿ ಎಷ್ಟು ಬಗೆಗಳು ? ಯಾವುವು ?

# ೧೪. ಪ್ರಯೋಗಗಳು

**ಕರ್ತರಿಪ್ರಯೋಗ, ಅಕರ್ಮಕ ಮತ್ತು ಸಕರ್ಮಕ:** ಚಿನ್ನದ ಚಿಗರೆ ಸುಳಿದಾಡುತ್ತಿತ್ತು. ಸೀತೆ ಅದನ್ನು ನೋಡಿದಳು.

ಇವು ಕರ್ತರಿ ಪ್ರಯೋಗದ ವಾಕ್ಯಗಳು, ಕರ್ತೃಕ್ರಿಯಾಪದಗಳಲ್ಲಿ ಪುರುಷಲಿಂಗ ವಚನಗಳ ಹೊಂದಿಕೆಯಿದೆ. ಮೇಲಿನ ವಾಕ್ಯಗಳು ಎಂತಹ ಕರ್ತರಿಪ್ರಯೋಗಗಳು ? ಏಕೆ?

**ಕರ್ಮಣಿ ಪ್ರಯೋಗ:** ರಾಮನಿಂದ ಚಿಗರೆ ಹೊಡೆಯಲ್ಪಟ್ಟಿತು. ಇದು **ಕರ್ಮಣಿ** ಪ್ರಯೋಗದ ವಾಕ್ಯ. ಏಕೆ ? ಈ ಪ್ರಯೋಗದ ಲಕ್ಷಣಗಳಾವುವು ?

**ಗುಪ್ತ ಕರ್ಮಣಿ ಪ್ರಯೋಗ:** ಜಟಾಯುವಿನ ರೆಕ್ಕೆಗಳು ಕಡಿದಿವೆ. ( ರೆಕ್ಕೆಗಳು ಕಡಿಯಲ್ಪಟ್ಟಿವೆ ). ಇದು ಗುಪ್ತ ಕರ್ಮಣಿ ಪ್ರಯೋಗದ ವಾಕ್ಯ. ಈ ವಾಕ್ಯ ರಚನೆಯ ಲಕ್ಷಣಗಳಾವುವು ?

**ಭಾವೇ ಪ್ರಯೋಗ: ಭಾವೇ** ( ? ) ಪ್ರಯೋಗ ಕನ್ನಡಕ್ಕೆ ಸ್ವಾಭಾವಿಕವಾದುದಲ್ಲ; ಅದು ಕನ್ನಡದಲ್ಲಿ ಸ್ಪಷ್ಟವಾಗಿ ಸಿಕ್ಕುವುದಿಲ್ಲ – ಎಂದು ಕೆಲವು ಜನ ವಿದ್ವಾಂಸರ ಮತ. ನಮ್ಮ

ಹಳಗನ್ನಡ ವ್ಯಾಕರಣಗಳಲ್ಲಿಯೂ ಈ ಬಗೆಗೆ ನಿಶ್ಚಿತಾಭಿಪ್ರಾಯವಿಲ್ಲ. ಆದರೆ–ಹುಡುಗರಿಗೆ ಹಣ್ಣುಗಳನ್ನು ಕೊಟ್ಟಿತ್ತು. **ಅವರಿಂದ ಅವುಗಳನ್ನು ತಿನ್ನಲಾಗಿದೆ.** ಹುಡುಗರನ್ನು ಶಾಲೆಗೆ ಕಳಿಸಿದೆ. ಅಲ್ಲಿ ಅವರಿಗೆ ಗುರುಗಳಿಂದ ಪಾಠಗಳನ್ನು ಹೇಳಲಾಗುವುದು.

ಈ ಬಗೆಯ ವಾಕ್ಯಗಳು ಬಳಕೆಯಲ್ಲಿವೆ. ಇವು ಕರ್ತರಿ–ಕರ್ಮಣಿ ಪ್ರಯೋಗಗಳಲ್ಲಿ ಸೇರುವುದಿಲ್ಲವೆ ? ಇವು ಭಾವೇ ಪ್ರಯೋಗಗಳೇ ?

ರಾಮನಿಗೆ ಸೀತೆಯನ್ನು ಕೊಟ್ಟಿತ್ತು – (ಗುಬ್ಬಿ) ಮರಿಗಳಿಗೆ ಗುಟುಕನ್ನು ಕೊಟ್ಟಿತ್ತು. ಈ ವಾಕ್ಯಗಳಲ್ಲಿ ಸಾರೂಪ್ಯವನ್ನು ಹೇಳುವುದಕ್ಕೆ ಅಪಾಯವೇನೂ ತೋರುವುದಿಲ್ಲ.

ಎರಡನೆಯ ವಾಕ್ಯ ಕರ್ತರಿ ಪ್ರಯೋಗವೆಂದು ಸಹಸಾ ತಿಳಿಯುತ್ತಿದೆ.

ಆದೇ ರೀತಿಯಲ್ಲಿ – (ಜನಕನೆಂಬ) ವ್ಯಕ್ತಿ ಅಥವಾ (ಜನಕರಾಜನ) ಇಚ್ಛೆ ರಾಮನಿಗೆ ಸೀತೆಯನ್ನು ಕೊಟ್ಟಿತ್ತು – ಎಂಬ ರೀತಿಯಿಂದ ನಪುಂಸಕಲಿಂಗದ ಕರ್ತೃವನ್ನು ಕಲ್ಪಿಸಿದರೆ ತಪ್ಪಾದೀತೆಂದು ತೋರುತ್ತಿದೆ. ಈ ವಾಕ್ಯದಲ್ಲಿ ಕರ್ತೃವಿನ ಆವಶ್ಯಕತೆಯಿಲ್ಲದುದರಿಂದ ಅದನ್ನು ಗುಪ್ತವಾಗಿರಿಸಿದೆ. ಆದರೂ ಕರ್ತರಿ ಪ್ರಯೋಗದ ಲಕ್ಷಣಗಳು ಸೂಚ್ಯವಾಗಿವೆ.

| | |
|---|---|
| ಊಟಕ್ಕೆ ಎಲೆ ಹಾಕಿತ್ತು<br>ಊಟಕ್ಕೆ ಎಲೆಗಳು ಹಾಕಿದ್ದುವು | ಗುಪ್ತ ಕರ್ಮಣಿಪ್ರಯೋಗ |
| ಆಳಿನಿಂದ ಊಟಕ್ಕೆ ಎಲೆ ಹಾಕಲ್ಪಟ್ಟಿತ್ತು<br>ಆಳಿನಿಂದ ಊಟಕ್ಕೆ ಎಲೆಗಳು ಹಾಕಲ್ಪಟ್ಟಿದ್ದುವು | ವ್ಯಕ್ತ ಕರ್ಮಣಿಪ್ರಯೋಗ |
| (ಆಳು) ಊಟಕ್ಕೆ ಎಲೆಗಳನ್ನು ಹಾಕಿತ್ತು<br>(ಆಳುಗಳು) ಊಟಕ್ಕೆ ಎಲೆಗಳನ್ನು ಹಾಕಿದ್ದುವು | ? ಕರ್ತರಿ ಪ್ರಯೋಗ |

ಈ ಪ್ರಯೋಗಗಳಲ್ಲಿ ಕರ್ತೃಗಳು ಗುಪ್ತವಾಗಿವೆ; ಅವುಗಳನ್ನು ನಪುಂಸಕಲಿಂಗ ರೂಪದಲ್ಲಿ ಅಧ್ಯಾಹೃತ ಮಾಡಿಕೊಳ್ಳಬಹುದಾಗಿದೆ. ಆದುದರಿಂದ ಇಂತಹವುಗಳನ್ನು **ಗುಪ್ತ ಕರ್ತರಿಪ್ರಯೋಗವೆನ್ನೋಣವೇ ?** ಭಾವೇ ಪ್ರಯೋಗದ ಬಗೆಗೆ ಈಗ ವಿಚಾರ ಮಾಡುವಾ.

| | |
|---|---|
| ಸಿಂಹದಿಂದ ಜಿಗರೆಯನ್ನು ತಿನ್ನಲಾಗಿದೆ.<br>ಸಿಂಹಗಳಿಂದ ಜಿಗರೆಗಳನ್ನು ತಿನ್ನಲಾಗಿದೆ<br>ಹುಡುಗನಿಂದ ಹಣ್ಣನ್ನು ತಿನ್ನಲಾಗಿದೆ.<br>ಹುಡುಗರಿಂದ ಹಣ್ಣುಗಳನ್ನು ತಿನ್ನಲಾಗಿದೆ.<br>ಹುಲಿಯಿಂದ ಮನುಷ್ಯನನ್ನು ತಿನ್ನಲಾಗಿದೆ.<br>ಬರಗಾಲ ಪೀಡಿತರಿಂದ ಮಕ್ಕಳನ್ನು ತಿನ್ನಲಾಗಿದೆ.<br>ನಿನ್ನಿಂದ ಉಂಡಿಯನ್ನು ತಿನ್ನಲಾಗಿದೆ.<br>ನಮ್ಮಿಂದ ಉಂಡಿಗಳನ್ನು ತಿನ್ನಲಾಗಿದೆ. | ಈ ಎಲ್ಲ ವಾಕ್ಯಗಳಲ್ಲಿ ತಿನ್ನುವ ಕ್ರಿಯೆಗೆ ತೃತೀಯಾಂತ ಕರ್ತೃಗಳೂ, ದ್ವಿತೀಯಾಂತ ಕರ್ಮಗಳೂ ಇವೆ. ಈ ಕರ್ತೃ ಕರ್ಮಗಳ ಪುರುಷಲಿಂಗ ವಚನಗಳು ಬೇರೆ ಬೇರೆ |

ಯಾಗಿರುವುದನ್ನು ಗಮನಿಸಿರಿ. **ಕ್ರಿಯಾಪದ** ಮಾತ್ರ ಎಲ್ಲ ವಾಕ್ಯಗಳಲ್ಲಿಯೂ **'ಇದ್ದ ಸ್ಥಿತಿಯಲ್ಲಿಯೇ'** ಇದೆ. ಯಾವ ಮಾರ್ಪಾಟವೂ ಆಗಿಲ್ಲ.

ನನ್ನಿಂದ – ನಮ್ಮಿಂದ, ನಿನ್ನಿಂದ – ನಿಮ್ಮಿಂದ, ಶಂಕರನಿಂದ, ಪಾರ್ವತಿಯಿಂದ, ಕಳ್ಳನಿಂದ – ಕಳ್ಳರಿಂದ, ಹುಲಿಯಿಂದ – ಹುಲಿಗಳಿಂದ — **ಓಡಲಾಗಿದೆ.** ಈ ಕ್ರಿಯಾ ಪದಕ್ಕೆ ಉಳಿದುವೆಲ್ಲವೂ ಕರ್ತೃಗಳು. ಅವುಗಳ ಪುರುಷ ಲಿಂಗ ವಚನಗಳು ಬದಲಾದರೂ **ಕ್ರಿಯಾಪದ ಇದ್ದ 'ಸ್ಥಿತಿಯಲ್ಲಿಯೇ'** ಇದೆ.

**ಇದ್ದ ಸ್ಥಿತಿಯಲ್ಲಿ–** ಎಂಬುದನ್ನು **'ಭಾವ'** ಎಂದು ಹೇಳಬಹುದಾದರೆ, ಕ್ರಿಯಾ ಪದ ಭಾವೇ – ಭಾವದಲ್ಲಿ – ಪ್ರಯೋಗವಾಗಿದೆ ಎಂದು ಒಪ್ಪಬೇಕಾಗುತ್ತಿದೆ.

ಯಾವ ವಾಕ್ಯದಲ್ಲಿಯೂ ಕ್ರಿಯಾಪದ ಒಂದೇ ರೂಪದಲ್ಲಿರುವಂತಹ ವಾಕ್ಯರಚನೆಯೇ ಭಾವೇ ಪ್ರಯೋಗವೆಂದು ಹೇಳಬಹುದು.

**ಭಾವೇ ಪ್ರಯೋಗದ ಹೆಗ್ಗುರುತು:** ಕರ್ತೃ ತೃತೀಯಾ ವಿಭಕ್ತಿಯಲ್ಲಿ, ಕರ್ಮ ದ್ವಿತೀಯಾ ವಿಭಕ್ತಿಯಲ್ಲಿ; ಕ್ರಿಯಾಪದ – ಮುಖ್ಯ ಧಾತುವಿನ ಮುಂದೆ ಅಲ್ ಆಗಮ ಪೂರ್ವಕವಾಗಿ ಆಗಿದೆ ಎಂಬ ಕ್ರಿಯಾಪದ ರೂಪದಲ್ಲಿ. ಪ್ರಸಂಗಾನುಸಾರವಾಗಿ ಆಗುತ್ತಿದೆ, ಆಗುವದು ಆಗಿವೆ ಎಂಬರೂಪಗಳೂ ಬರಬಹುದು. ಅಕರ್ಮಕ ಸಕರ್ಮಕ ಎರಡೂ ಧಾತು ಗಳಲ್ಲಿಯೂ ಈ ಪ್ರಯೋಗ ತೋರುತ್ತಿದೆ. ಸಂಸ್ಕೃತದಲ್ಲಿ ಮಾತ್ರ ಅಕರ್ಮಕ ಕ್ರಿಯಾಪದ ಗಳಲ್ಲಿಯೇ ಈ ಪ್ರಯೋಗವಿದೆ.

**ನೆನಪು:** ಭಾವೇ ಪ್ರಯೋಗದ ವಿಚಾರ ಕನ್ನಡದಲ್ಲಿ ಇನ್ನೂ ಆಗಬೇಕಾಗಿದೆ. ಇದ ಮಿತ್ಥಂ, ಎಂದು ಹೇಳುವ ಹಟ ನಮಗಿಲ್ಲ. ವಿದ್ವಾಂಸರ ವಿಚಾರ ಪ್ರಚೋದನೆಗಾಗಿ ನಮಗೆ ತಿಳಿದುದನ್ನು ಬರೆದಿರುವೆವು. ಊಹಾಪೋಹ ಮಾಡಿ ನಿರ್ಣಯವನ್ನು ಕೊಡುವರು ಸಹೃದಯರಾದ ವೈಯಾಕರಣಿಗಳು.

## — ಬಳಕೆ ಮತ್ತು ಕೇಳಿಕೆ —

೧. ಕೆಳಗಿನ ಪ್ರಯೋಗಗಳನ್ನು ಗುರುತಿಸಿ ಹೆಸರು ಹೇಳಿರಿ.

ಹುಡುಗರು ಹತ್ತಿಯನ್ನು ತರುತ್ತಾರೆ. ಕದಿರಿನಿಂದ ಅರೆದರೆ ಬೀಜಗಳು ಹೊರಬೀಳು ತ್ತಿವೆ. ಆಗ ಅರಳೆಯಾಗುವುದು. ಅರಳೆಯಿಂದ ಕುಕ್ಕಡಿಗಳು ಮಾಡಲ್ಪಡುವುವು. ಕುಕ್ಕಡಿಯಿಂದ ನೂಲನ್ನು ತೆಗೆಯಲಾಗುತ್ತಿದೆ. ನೂಲಿನಿಂದ ಲಡಿಗಳು ಮಾಡಿವೆ. ಲಡಿಗಳಿಂದ ಹಾಸುಗಳನ್ನು ಮಾಡಲಾಗುವುದು. ಇಂತಹ ಹಾಸುಗಳಿಂದಲೇ ನಮ್ಮ ಬಟ್ಟೆಗಳನ್ನು ನೆಯ್ಯಲಾಗಿದೆ.

೨. ಗುಪ್ತ ಕರ್ತರಿ ಪ್ರಯೋಗವೆಂದರೇನು ? ಉದಾಹರಣ ಕೊಟ್ಟು ಚರ್ಚಿಸಿರಿ.

೩. ಭಾವೇ ಪ್ರಯೋಗವೆಂದರೇನು ? ಕೊಡು, ಓಡು ಧಾತುಗಳನ್ನಿಟ್ಟುಕೊಂಡು ಈ ಪ್ರಯೋಗ ರಚನೆಯನ್ನು ಚರ್ಚಿಸಿರಿ.

## ೧೫. ಛಂದಸ್ಸು

### ಪೂರ್ವಜ್ಞಾನದ ಪುನರಾವರ್ತನ

**ಛಂದಶ್ಶಾಸ್ತ್ರ:** ಪದ್ಯ ರಚನೆಯ ನಿಟ್ಟು ನಿಯಮಗಳ ಶಾಸ್ತ್ರವೇ ಛಂದಸ್ಸು.

**ಮಾತ್ರೆ:** ಒಮ್ಮೆ ರೆಪ್ಪೆ ಬಡಿಯುವಷ್ಟು ಕಾಲವನ್ನು ಮಾತ್ರೆಯೆನ್ನುವರು.

**ಲಘುಮಾತ್ರೆ:** ಒಮ್ಮೆ ರೆಪ್ಪೆಯನ್ನು ಬಡಿಯುವ ಕಾಲದಲ್ಲಿ ಉಚ್ಚರಿಸಲಾಗುವ ಅಕ್ಷರವನ್ನು ಲಘುಮಾತ್ರೆಯೆನ್ನುವರು.

**ಗುರುಮಾತ್ರೆ:** ಲಘು ಅಕ್ಷರದ ಇಮ್ಮಡಿ ವೇಳೆಯಲ್ಲಿ ಹೇಳಲಾಗುವುದು ಗುರುಮಾತ್ರೆ.

**ಲಘು ಅಕ್ಷರಗಳು:** ಹ್ರಸ್ವಸ್ವರಗಳೂ ಅವುಗಳಿಂದ ಕೂಡಿದ ಗುಣಿತಾಕ್ಷರಗಳೂ ಒತ್ತಕ್ಷರಗಳೂ ಲಘು ಅಕ್ಷರಗಳು.

ಹೇಗೆ: ಅ, ಇ, ಎ, ತೆ, ತೊ, ಕ್ತ, ಪ್ರ, ತ್ರೊ ಮುಂತಾಗಿ.

**ಗುರು ಅಕ್ಷರಗಳು:** ದೀರ್ಘಸ್ವರಗಳೂ ಅವುಗಳಿಂದ ಕೂಡಿದ ಗುಣಿತಾಕ್ಷರ ಒತ್ತಕ್ಷರಗಳೂ ಗುರು ಅಕ್ಷರಗಳು.

ಹೇಗೆ: ಆ, ಈ, ಏ, ಐ, ಕೂ, ಚೈ, ಪ್ರಾ, ಸ್ತೇ, ಸ್ತ್ರೀ ಮುಂ.

**ಲಘು, ಗುರು ಚಿಹ್ನೆಗಳು:** ಲಘುವಿನ ಚಿಹ್ನೆ 'U'; ಗುರುವಿನ ಚಿಹ್ನೆ '—'.

ಲಘುವನ್ನು ಲ ಎಂದೂ ಗುರುವನ್ನು ಗ ಎಂದೂ ಹೇಳುವದುಂಟು.

**ಪ್ರಸ್ತಾರ:** ಪದ್ಯದೊಳಗಿನ ಅಕ್ಷರಗಳನ್ನು ಕ್ರಮದಿಂದ ಲಘು, ಗುರು ಚಿಹ್ನೆಗಳಿಂದ ಗುರುತಿಸುವುದು ಪ್ರಸ್ತಾರ.

**ಲಘುವಿಗೆ ಗುರುತ್ವ ಬರುವುದು:** ಲಘುವಿನ ಮುಂದೆ ಅನುಸ್ವಾರ, ವಿಸರ್ಗ, ವ್ಯಂಜನಾಕ್ಷರ, ಸಂಯುಕ್ತಾಕ್ಷರಗಳಿದ್ದಾಗಲೂ ಪದ್ಯಾರ್ಧ ಮತ್ತು ಪೂರ್ಣ ಪದ್ಯಗಳ ಕೊನೆಯಲ್ಲಿ ಲಘುವಿದ್ದಾಗಲೂ ಆ ಲಘು ಅಕ್ಷರಗಳಿಗೆ ಗುರುತ್ವ ಬರುತ್ತದೆ.

ಹೇಗೆ: — — — U U — — — — U U U U U — U — U U U U —
ಪ್ರಾ ತಃ ಕಾ ಲ ದೊ ಳ ಬ್ಜ ವ್ರಾಂ ತಂ ನೆ ರೆ ಬಿ ರಿ ಯೆ ತುಂ ಬಿ ಗಳ್ ಸೆ ರೆ ಮ ರೆ ಯ

ಯಕಾರ ಪದ್ಯಾರ್ಧದ ಕೊನೆಯಲ್ಲಿರುವುದರಿಂದ ದೀರ್ಘವಾಗಿದೆ.

**ನೆನಪು:** ಬರ್ದಿಲ ಮುಂತಾದ ಶಿಥಿಲ ಸಂಯುಕ್ತಾಕ್ಷರಗಳ ಹಿಂದಿನ ಮತ್ತು ಸಂಸ್ಕೃತ ಸಂಯುಕ್ತಾಕ್ಷರಗಳ ಹಿಂದಿನ ಕನ್ನಡ ಪದದ ಕೊನೆಯ ಲಘುಗಳಿಗೆ ಗುರುತ್ವವಿಲ್ಲ.

ಹೇಗೆ: U U U U U U U U U U U — — — U
ಪ ಳ ಪ ಳ ನು ದಿ ರ್ವ ವೊ; ಪಿ ಡಿ ದ ಶ್ರ ದ್ಧಾ ಯ ಷ್ಟಿ

**ಗಣ:** ಪದ್ಯದ ಸಾಲುಗಳಲ್ಲಿ ಛಂದೋ ನಿಯಮಕ್ಕೆ ಒಳಪಟ್ಟು ಎಣಿಕೆಯಂತೆ ಸಣ್ಣ ಸಣ್ಣ ತುಂಡುಗಳಿರುತ್ತವೆ. ಅವುಗಳನ್ನು ಗಣಗಳೆನ್ನುವರು. ಅಥವಾ, ಲಘು ಗುರುಗಳ ನಿಯಮಿತ ಎಣಿಕೆಗಳಿಗೆ ಹೊಂದುವಂತೆ ಪದ್ಯಗಳ ಸಾಲುಗಳಲ್ಲಿ ಮಾಡಲ್ಪಟ್ಟ ತುಂಡುಗಳನ್ನು ಗಣಗಳೆನ್ನುತ್ತಾರೆ.

**ಗಣಗಳ ಬಗೆಗಳು:** ಮಾತ್ರೆಗಳ ಎಣಿಕೆಯಿಂದಾದುವು ಮಾತ್ರಾಗಣಗಳು; ಅಕ್ಷರಗಳ ಎಣಿಕೆಯಿಂದಾದುವು ಅಕ್ಷರಗಣಗಳು.

ಹೇಗೆ: **ಮಾತ್ರಾಗಣ:**
U U U U U | — U U U | — U U U U U U U U
ಘು ರ ದೊ ಳ ರಿ | ಭೂ ಭು ಜ ರ | ನಂ ಜಿ ಸು ವ ನ ಡು ಗಿ ಸ ಮ

ಅಯ್ದಯ್ದು ಮಾತ್ರೆಗಳ ಎಣಿಕೆಯ ನಾಲ್ಕು ಗಣಗಳಿವೆ. ಇಲ್ಲಿ ಅಕ್ಷರಗಳ ಎಣಿಕೆ ಮುಖ್ಯವಲ್ಲ. ೨, ೩ನೆಯ ಗಣಗಳಲ್ಲಿ ೪ ಅಕ್ಷರಗಳಿಗೆ ೫ ಮಾತ್ರೆಗಳಾಗಿವೆ.

**ಅಕ್ಷರಗಣ:**

U U U | U — U | — U U | U — U | U — U | U — U | — U —
ನೆ ನೆ ಯ | ದೆ ಗೋ ಪಿ | ಪಾ ಲ್ಗ ಡೆ | ವು ತುಂ ಮ | ನೆ ವಾ ರ್ತೆ | ಗೆ ಪೋ ಗ | ಗೆ ಜ್ಜೆ ಯಿಂ

ಇಲ್ಲಿ ಮೂರು ಮೂರು ಅಕ್ಷರಗಳ ಎಣಿಕೆಯಿಂದಲೇ ಒಂದೊಂದು ಗಣವನ್ನು ಮಾಡಿದೆ ಮಾತ್ರೆಗಳ ಎಣಿಕೆ ಹೆಚ್ಚು ಕಡಿಮೆಯಾದರೂ ಅಡ್ಡಿಯಿಲ್ಲ. ಮೊದಲನೆಯ ಗಣದಲ್ಲಿ ೩ ಮಾತ್ರೆಗಳೂ ಕೊನೆಯ ಗಣದಲ್ಲಿ ೫ ಮಾತ್ರೆಗಳೂ ಇರುವುದನ್ನು ಗಮನಿಸಿರಿ.

**ಮಾತ್ರಾಗಣಗಳ ಪ್ರಕಾರಗಳು:** ಮಾತ್ರಾಗಣಗಳಲ್ಲಿ (೧) ಮೂರು ಮಾತ್ರೆ, (೨) ನಾಲ್ಕು ಮಾತ್ರೆ, (೩) ಅಯ್ದು ಮಾತ್ರೆ ಎಂದು ಮೂರು ಪ್ರಕಾರಗಳಿವೆ. ಇವುಗಳಲ್ಲಿ ರೂಪ ಬೇರೆಯಾದರೂ ಎಣಿಕೆ ಅಷ್ಟಷ್ಟೇ ಇರುತ್ತದೆ.

**೩ ಮಾತ್ರೆಗಳ ಮತ್ತು ಗಣಗಳ ೩ ಬಗೆ:** (೧) U U U ತಿ ಳಿ ದು (೨) — U ನೋ ಡು (೩) U — ಸ ದಾ

**೪ ಮಾತ್ರೆಗಳ ಮಾತ್ರಾಗಣಗಳು ೫ ಬಗೆ:**

(೧) U U U U ಇ ನಿ ಯ ನ (೨) — U U ಸುಂ ದ ರ (೩) U — U ಶ ರೀ ರ (೪) U U — ಸೊ ಬ ಗಂ (೫) — — ನೋ ಳ್ಪಂ

**೫ ಮಾತ್ರೆಗಳ ಮಾತ್ರಾಗಣಗಳು ೮ ಬಗೆ:**

(೧) U U U U U ಕ ನ ಕ ಮೃ ಗ (೨) — U U U ರೂ ಪ ವ ದು (೩) U — U U ಮ ನಂ ಬು ಗೆ (೪) U U — U ರ ಘು ರಾ ಮ

(೫) U U U — ಧ ನು ವ ತಾಂ (೬) — — U ಕೈ ಕೊಂ ಡು (೭) — U — ಬಾ ಣ ದಿಂ (೮) U — — ದೆ ಪೊ ಯ್ದಂ

## ಮಾತ್ರಾವೃತ್ತಗಳು

**ಕಂದ ( ಅರ್ಧ ):**

| ೧ | ೨ | ೩ | ೪ | ೫ | ೬ | ೭ | ೮ |
|---|---|---|---|---|---|---|---|
| ∪ ∪ ∪ ∪ | ∪ ∪∪∪ | — — | ∪ ∪ ∪∪ | —∪∪ | ∪ ∪ ∪ ∪ | ∪∪— | ∪∪— |
| ಡುಘುಡು | ಚಿಳಿಚಿಟಿ | ಲೆಂದು | ಗ್ಗಡದಸಿ | ಡಿಲ್ವನಿ | ಯೆಪೊಡೆಯೆ | ಗಗನ | ಸ್ಥಳದಿಂ |

**ಕಂದಪದ್ಯದ ಲಕ್ಷಣ:** ಕಂದಪದ್ಯ ಅರ್ಧ ಸಮವೃತ್ತ. ಮೊದಲರ್ಧ ಉಳಿದರ್ಧಕ್ಕೆ ಮಾತ್ರೆಗಳಿಂದ ಸರಿಯಿರುವುದು. ೧ನೆಯ ಸಾಲಿನಲ್ಲಿ ೪ ಮಾತ್ರೆಗಳ ೩ ಗಣಗಳೂ; ೨ನೆಯ ಸಾಲಿನಲ್ಲಿ ಅಂತಹ ೫ ಗಣಗಳೂ ಇರಬೇಕು. ೫ ನೆಯ ಗಣದ ಕೊನೆಯಕ್ಷರ ಗುರು. ೧, ೩, ೫ ಮುಂತಾಗಿ ವಿಷಮ ಗಣಗಳಲ್ಲಿ ( ∪ — ∪ ) ಜಗಣ ಬರಬಾರದು. ೬ನೆಯ ಗಣದಲ್ಲಿ ಜಗಣ ಇಲ್ಲವೆ ನಗಣ (ನಾಲ್ಕು ಲಘು). ಪ್ರತಿಸಾಲಿನ ೨ನೆಯ ಸ್ಥಳದಲ್ಲಿ ಪ್ರಾಸ.

## ಷಟ್ಪದಿಗಳು

**ಷಟ್ಪದಿ ಎಂದರೇನು ?** ಷಟ್‌ಪದಿ ಎಂದರೆ ಆರು ಸಾಲುಗಳನ್ನುಳ್ಳ ಪದ್ಯಗಳು. ಇದರಲ್ಲಿ ಮೊದಲಿನ ಮೂರು ಸಾಲುಗಳು, ಮಾತ್ರೆಗಳ ಎಣಿಕೆಯಿಂದ ಉಳಿದ ಮೂರು ಸಾಲುಗಳಿಗೆ ಸಮವಾಗಿರುತ್ತವೆ. ಆದುದರಿಂದ ಇವುಗಳನ್ನು ಅರ್ಧಸಮವೃತ್ತಗಳೆನ್ನುವರು.

ಅಲ್ಲದೆ. ಷಟ್ಪದಿಗಳಲ್ಲಿ ೧, ೨, ೪, ೫ನೆಯ ಸಾಲುಗಳಲ್ಲಿ ಅಷ್ಟಷ್ಟೇ ಮಾತ್ರೆಗಳೂ ಗಣಗಳೂ ಇರುವುವು. ೩ ಮತ್ತು ೬ನೆಯ ಸಾಲುಗಳು ಮಾತ್ರೆ ಗಣಗಳ ಎಣಿಕೆಯಿಂದ ಸರಿಯಾಗಿರುವುವು.

ಷಟ್ಪದಿಗಳಲ್ಲಿ ೩–೬ನೆಯ ಸಾಲುಗಳು ದೊಡ್ಡವು. ಉಳಿದುವೆಲ್ಲ ಸಣ್ಣವು. ಸಣ್ಣ ಸಾಲುಗಳ ೧½ ಪಟ್ಟು ಗಣ-ಮಾತ್ರೆಗಳೂ ಮೇಲೊಂದು ಗುರುವೂ ದೊಡ್ಡಸಾಲಿನಲ್ಲಿರುವುವು.

**ಷಟ್ಪದಿಗಳಲ್ಲಿ ಬಗೆಗಳು:** ಈ ಷಟ್ಪದಿಗಳಲ್ಲಿ ಶರ, ಕುಸುಮ, ಭೋಗ, ಭಾಮಿನಿ, ಪರಿವರ್ಧಿನಿ, ವಾರ್ಧಕ ಎಂದು ಆರು ಬಗೆಯಿವೆ. ಇವುಗಳಲ್ಲಿ ಭಾಮಿನಿ, ವಾರ್ಧಕಗಳೇ ಹೆಚ್ಚಾಗಿ ಬಳಕೆಯಲ್ಲಿವೆ.

## ಭಾಮಿನೀಷಟ್ಪದಿ

| ೧ | ೨ | ೩ | ೪ | | | | |
|---|---|---|---|---|---|---|---|
| ∪ ∪ | — ∪∪ | —∪∪ | —∪∪ | ∪ ∪ ∪ | ∪∪∪∪ | ∪ ∪ ∪ | ∪∪∪∪ |
| ಡೆವೊ | ಡೀ ಪರಿ | ಬೇಹ | ಮಕ್ಕಳ | ಪಡೆದು | ಪರಿಣಮಿ | ಸುವುದು | ತಪದಲಿ |

| ೧ | ೨ | | ೪ | ೫ | ೬ | — |
|---|---|---|---|---|---|---|
| ∪∪∪ | —∪∪ | ∪ ∪ ∪ | —∪ ∪ | ∪ ∪ ∪ | ∪ ∪ ∪ ∪ | ಗು |
| ನಡೆವು | ದೀ ಪರಿ | ನಿ ಜ ಸ | ಮಾಧಿಯ | ನಿಲುವು | ನಿಲುಕುವು | ದು॥ |

**ವಿವರಣ:** ಭಾಮಿನೀ ಷಟ್ಪದಿಯ ೧, ೨, ೪, ೫ನೆಯ ಸಾಲುಗಳಲ್ಲಿ ಕ್ರಮದಿಂದ ೩ ೪, ೩, ೪ ಮಾತ್ರೆಗಳ ೪ ಗಣಗಳೂ, ೩, ೬ನೆಯ ಸಾಲುಗಳಲ್ಲಿ ೩, ೪ ಮಾತ್ರೆಗಳ

ಕ್ರಮದಲ್ಲಿಯೇ ೬ ಗಣಗಳೂ ಮೇಲೊಂದು ಗುರುವೂ ಇರುತ್ತಿವೆ. ಈ ಯಾವ ಗಣಗಳಲ್ಲಿಯೂ ∪—, ∪—∪ ಈ ಗಣಗಳು ಇರಕೂಡದು. ಪ್ರತಿಸಾಲಿನ ೨ನೆಯ ಅಕ್ಷರದಲ್ಲಿ ತೋರಪ್ರಾಸವಿರುವುದು.

## ವಾರ್ಧಕ ಷಟ್ಪದಿ

| ೧ | ೨ | ೩ | ೪ |
|---|---|---|---|
| ∪∪∪∪ | —∪∪∪ | ∪∪∪∪∪ | ∪∪—∪∪ |
| ದಶರಥ ನೃ | ಪಾಲಸುತ | ನರಮುನೆಯು | ಬೆಳುವಿಗೆಯ |

ಶಿಶುಗಳ್ಗಿ ಕಾಂತಾರವಾಸದೊಳ್ ನಡೆವ ಕ।

| ೧ | ೨ | ೩ | ೪ | ೫ | ೬ | ಗು |
|---|---|---|---|---|---|---|
| ∪∪∪— | ∪∪—∪ | ∪∪—∪ | ——∪ | —∪— | ∪∪∪— | — |
| ರ್ಕಶಮಿದೆ | ತ್ರಣದೆಂದು | ಮಿಥಿಳೇಂದ್ರ | ಸಂಭೂತೆ | ಚಿತ್ತದೊಳ್ | ಮರುಗದಂ | ತೆ॥ |

**ವಿವರಣ:** ವಾರ್ಧಕ ಷಟ್ಪದಿಯ ೧, ೨, ೪, ೫ನೆಯ ಚರಣಗಳಲ್ಲಿ ಅಯ್ದಯ್ದು ಮಾತ್ರೆಯ ೪ ಗಣಗಳೂ; ೩, ೬ನೆಯ ಸಾಲಿನಲ್ಲಿ ೫ ಮಾತ್ರೆಯ ೬ ಗಣಗಳೂ ಮುಂದೆ ಗುರುವೂ ಇರುವವು. ಈ ಯಾವ ಗಣಗಳಲ್ಲಿಯೂ ಜಗಣ ಬರಬಾರದು. ಪ್ರತಿಪಾದದ ೨ನೆಯ ಅಕ್ಷರದಲ್ಲಿ ತೋರಪ್ರಾಸವಿರುವುದು.

## ರಗಳೆಗಳು

**ಸಾಮಾನ್ಯ ಲಕ್ಷಣ:** ರಗಳೆಗಳು ಇಂತಿಷ್ಟೇ ಸಾಲಗಳೆಂಬ ಕಡ್ಡಾಯವಿಲ್ಲ. ಒಟ್ಟಾರೆ, ಸಮಸಾಲುಗಳಿರಬೇಕು. ಎಲ್ಲ ಸಾಲುಗಳಲ್ಲಿಯೂ ಮಾತ್ರೆ – ಗಣಗಳ ಎಣಿಕೆ ಸಮನಾಗಿರಬೇಕು. ಪ್ರಾಸಾಕ್ಷರ ದ್ವಿತೀಯ ಸ್ಥಾನದಲ್ಲಿಯೇ ಇರಬೇಕಾಗಿಲ್ಲ. ಆದಿ, ಮಧ್ಯ, ಅಂತ್ಯ ಬೇಕಾದಲ್ಲಿರಬಹುದು. ಗಣಗಳು ಸರಳಾಕ್ಷರಗಳಿಂದ ಕಂಡರಿಸಿರಬೇಕು.

ಈ ರಗಳೆಯಲ್ಲಿ ಮಂದಾನಿಲ, ಲಲಿತ, ಉತ್ಸಾಹ ಎಂದು ಮೂರುಬಗೆಗಳಿವೆ.

**ಮಂದಾನಿಲ:**

| | | | |
|---|---|---|---|
| — — | ∪ ∪ ∪ ∪ | — ∪ ∪ | ∪ ∪ ∪ ∪ |
| ಆ ವೇ | ಳೆ ಯೊಳತಿ | ಸಂಭ್ರಮ | ಮೆ ಸೆ ದಿ ರೆ |
| — ∪ ∪ | ∪ ∪ — | ∪ ∪ — | ∪ ∪ ∪ ∪ |
| ಪೂವಲಿ | ಪುರವೀ | ಥಿಗಳೊಳ್ | ಮೆ ರೆ ದಿ ರೆ |

**ಲಕ್ಷಣ:** ಪ್ರತಿಪಾದದಲ್ಲಿ ೪ ಮಾತ್ರೆಯ ೪ ಗಣಗಳು. ಆದಿಅಂತಪ್ರಾಸ.

**ಲಲಿತರಗಳೆ:**

| | | | |
|---|---|---|---|
| ∪ ∪ — ∪ | ∪ ∪ — ∪ | — ∪ ∪ ∪ | ∪ ∪ — ∪ |
| ಮ ಳೆ ನಿಂದು | ಚಳಿ ಬಂ ದ | ಮೋಡವಳಿ | ದಿರುವಂದು |
| ∪ ∪ — ∪ | ∪ ∪ ∪ ∪ ∪ ∪ | ∪ ∪ — ∪ | ∪ ∪ — ∪ |
| ಚಳಿ ಗಾಲ | ವ ನ ಗ ಳ ಲಿ | ಸುಳಿ ದಾಡು | ತಿರುವಂದು |

**ಲಕ್ಷಣ:** ಪ್ರತಿಪಾದದಲ್ಲಿ ೫ ಮಾತ್ರೆಯ ೪ ಗಣಗಳು. ಆದಿ, ಮಧ್ಯ, ಅಂತಪ್ರಾಸ.

**ಉತ್ಸಾಹ ರಗಳೆ:**

| – ∪ | – ∪ | – ∪ | – ∪ | – ∪ | ∪ ∪ ∪ | – ∪ | – ∪ |
|---|---|---|---|---|---|---|---|
| ಸಾಕು | ಸಾಕು | ಭಾಗ್ಯ | ದೇವ | ನಿಮ್ಮ | ಮೊದಲೆ | ಐದೆ | ಸಾವ |
| – ∪ | ∪∪∪ | – ∪ | ∪∪∪ | – ∪ | ∪∪∪ | – ∪ | ∪ ∪ ∪ |
| ನೀಡಿ | ರೆನಗೆ | ಸನ್ನ | ತನುವ | ಮಾಂಸ | ದಡಿಗೆ | ಯಿಂದ | ಮನವ |

**ಲಕ್ಷಣ:** ಪ್ರತಿಪಾದದಲ್ಲಿ ಮೂರು ಮೂರು ಮಾತ್ರೆಗಳ ೮ ಗಣಗಳು.

## ಸುನೀತಗೀತ ಅಥವಾ ಅಷ್ಟ ಷಟ್ಪದಿ ( ಸೊನೆಟ್ )

ಈ ಛಂದಸ್ಸು ಇಂಗ್ರೀಜಿಯಿಂದ ಬಂದುದು: ಈಗ ಕನ್ನಡದಲ್ಲಿ ಬಹಳ ಬಳಕೆಯಲ್ಲಿದೆ.

**ಲಕ್ಷಣ:** ಇದರಲ್ಲಿ ಒಟ್ಟು ೧೪ ಸಾಲುಗಳು. ಪ್ರತಿಪಾದದಲ್ಲಿ ೫ ಮಾತ್ರೆಯ ನಾಲ್ಕು ಗಣಗಳು. ೮ ಸಾಲುಗಳಿಗೆ ಒಂದು ಅಭಿಪ್ರಾಯ ಮುಗಿಯಬೇಕು. ಉಳಿದ ೬ ಸಾಲುಗಳ ಮತ್ತೊಂದು ಅಭಿಪ್ರಾಯವೂ ಮುಗಿಯಬೇಕು. ಕೆಲವರು ಮೊದಲಿನ ೧೨ ಸಾಲುಗಳ ಒಂದು ವಿಚಾರವನ್ನೂ ಮತ್ತೆ ೨ ಸಾಲುಗಳಲ್ಲಿ ಒಂದು ಮಾತನ್ನೂ ಮುಗಿಸುತ್ತಾರೆ. ಆದ ೮ + ೬ ಸಾಲುಗಳ ರಚನೆಯೇ ಹೆಚ್ಚಾಗಿ ಬಳಕೆಯಲ್ಲಿದೆ.

**ಅಕ್ಷರಗಣಗಳು ಎಷ್ಟು?** ಅಕ್ಷರಗಣ ಮುಖ್ಯವಾಗಿ ಎಂಟು ಇವೆ. ಅವುಗಳ ವಿವರ.

| ಕ್ರ. ಸಂ | ಉದಾಹರಣ | ಪ್ರಸ್ತಾರ | ವಿಶಿಷ್ಟ ಲಕ್ಷಣ | ಗಣದ ಹೆಸರು |
|---|---|---|---|---|
| ೧ | ಕಾಪಾಲೀ | — — — | ಮೂರುಗುರು | ಮ ಗಣ |
| ೨ | ಸುನಾಮಾ | ∪ — — | ಆದಿಲಘು | ಯ ಗಣ |
| ೩ | ಮಾನುಷೀ | — ∪ — | ಮಧ್ಯಲಘು | ರ ಗಣ |
| ೪ | ವಿನತಾ | ∪ ∪ — | ಅಂತ್ಯಗುರು | ಸ ಗಣ |
| ೫ | ಶ್ರೀರಾಮ | — — ∪ | ಅಂತ್ಯಲಘು | ತ ಗಣ |
| ೬ | ವಿನಾಶ | ∪ — ∪ | ಮಧ್ಯಗುರು | ಜ ಗಣ |
| ೭ | ವಾಮನ | — ∪ ∪ | ಆದಿಗುರು | ಭ ಗಣ |
| ೮ | ಶರಭ | ∪ ∪ ∪ | ಮೂರುಲಘು | ನ ಗಣ |

ಗುರು ಲಘು ಮೂರಿರೆ ಮ–ನ ಗಣ ।
ಗುರು ಲಘು ಮೊದಲಲ್ಲಿ ಬರಲು ಭ–ಯ ಗಣ ಮತ್ತಾ ॥
ಗುರು ಲಘು ನಡುವಿರೆ ಜ–ರ ಗಣ ।
ಗುರು ಲಘು ಕಡೆಯಲ್ಲಿ ಬರಲು ಸ–ತ ಗಣಮಕ್ಕುಂ ॥

ಮೂರು ಗುರು ಇರಲು **ಮ** ಗಣ; ಮೂರು ಲಘು ಇರಲು **ನ** ಗಣ; ಗುರು ಮೊದಲು ಬಂದು ಅದರ ಮುಂದೆ ೨ ಲಘುವಿದ್ದರೆ **ಭ** ಗಣ; ಲಘು ಮೊದಲು ಬಂದು ಅದರ ಮುಂದೆ ೨ ಗುರುವಿದ್ದರೆ **ಯ** ಗಣ; ಗುರು ನಡುವಿದ್ದು ಎಡಬಲಗಳಲ್ಲಿ ಲಘುಗಳಿದ್ದರೆ **ಜ** ಗಣ; ಲಘು ನಡುವಿದ್ದು ಎಡಬಲಗಳಲ್ಲಿ ಗುರುಗಳಿದ್ದರೆ **ರ** ಗಣ; ಗುರು ಕಡೆಗಿದ್ದು ಮೊದಲೆರಡು ಲಘುಗಳಿದ್ದರೆ **ಸ** ಗಣ; ಲಘು ಕಡೆಗಿದ್ದು ಮೊದಲೆರಡು ಗುರುಗಳಿದ್ದರೆ **ತ** ಗಣ.

ಈ ಪದ್ಯ ಅಕ್ಷರ ಗಣಗಳನ್ನು ಗುರುತಿಸಲು ಸಾಹಾಯ್ಯವಾಗುವುದು.

**ಯತಿ:** ಪದ್ಯವನ್ನು ಹೇಳುವಾಗ ಅಲ್ಲಲ್ಲಿ ತಡೆಯುವ (Pause) ಸ್ಥಳಗಳು ಯತಿ ಸ್ಥಾನಗಳು. ಅಕ್ಷರ ವೃತ್ತಗಳಲ್ಲಿ ಪ್ರತಿಪದದ ಒಳಗೆ ಮತ್ತು ಕೊನೆಯಲ್ಲಿ ಯತಿ ಇರುತ್ತದೆ. ಮಾತ್ರಾವೃತ್ತಗಳಲ್ಲಿ ಪದ್ಯಾರ್ಧದ ಮತ್ತು ಪೂರ್ಣಪದ್ಯದ ಕೊನೆಯಲ್ಲಿ ಯತಿ ತೋರುವುದು. ಗಮಕಿಗಳು ಅರ್ಥ ವ್ಯಕ್ತವಾಗುವಂತೆ ನಡುನಡುವೆಯೂ ಯತಿಯನ್ನು ತೋರಿಸುತ್ತಾರೆ ಇವುಗಳಿಗೆ ಮಾತ್ರ ನಿಯಮಿತ ಸ್ಥಾನವಿಲ್ಲ.

**ಪ್ರಾಸ:** ಪದ್ಯಗಳ ಪ್ರತಿಯೊಂದು ಪದದ ೧ನೆಯ ೨ನೆಯ ಸ್ವರಗಳ ನಡುವಿನ ಒಂದೇ ಬಗೆಯ ವ್ಯಂಜನ ಅಥವಾ ವ್ಯಂಜನಗಳು ಪ್ರಾಸಾಕ್ಷರಗಳು. ಇದನ್ನು ಕನ್ನಡದಲ್ಲಿ **ತೋರ ಪ್ರಾಸ**ವೆಂದು ಅತಿ ಮುಖ್ಯವಾಗಿ ಎಣಿಸಿದೆ.

ಹೇಗೆ: ಶ್ರೀ**ಮ**ತ್ಸಚಿವ........| ಪ್ರೇ**ಮ**ದಿಂ........| ನೇ**ಮಿ**ಸಿದ........
ಹೊ**ತ್ತು**ಗಳೆಯದೆ........| ವಿ**ತ್ತ**ವಿದ್ಯಾ........| ಸು**ತ್ತಿ**ರದೆ........
ಪ್ರಾಸಾಕ್ಷರಗಳನ್ನು ದಪ್ಪಕ್ಷರಗಳಿಂದ ತೋರಿಸಿದೆ.

## ಅಕ್ಷರವೃತ್ತಗಳು

**ಸಾಮಾನ್ಯ ಲಕ್ಷಣ:** ಮೂರು ಮೂರು ಅಕ್ಷರಗಳ ಎಣಿಕೆಯಿಂದಾಗುವ ಅಕ್ಷರಗಣಗಳನ್ನುಳ್ಳ ವೃತ್ತಗಳು ಅಕ್ಷರವೃತ್ತಗಳು. ಸಾಮಾನ್ಯವಾಗಿ ಇವೆಲ್ಲವೂ ನಾಲ್ಕು ಸಾಲುಗಳ ಸಮವೃತ್ತಗಳು. ಮೊದಲನೆಯ ಪದದಲ್ಲಿರುವಂತೆಯೇ ಉಳಿದೆಲ್ಲ ಚರಣಗಳಲ್ಲಿಯೂ ಮಾತ್ರೆಗಳ ಜೋಡಣೆಯಿರುತ್ತದೆ. ಪ್ರತಿಸಾಲಿನ ನಡುವೆಯೂ ಕೊನೆಯಲ್ಲಿಯೂ ಯತಿ ಸ್ಥಾನಗಳಿರುವುವು.

ಅಕ್ಷರವೃತ್ತದಲ್ಲಿ ೧ ಅಕ್ಷರದ ಸಾಲಿನ ಪದ್ಯದಿಂದ ೨೬ ಅಕ್ಷರಗಳನ್ನುಳ್ಳ ಸಾಲಿನ ವರೆಗೂ ೨೬ ಬಗೆಯ ಛಂದಸ್ಸುಗಳಾಗಿವೆ. ಮತ್ತೆ ಅವುಗಳ ತಿರುವು ಮುರುವು (ಶೃಂಖಲಾ) ಪದ್ಧತಿಯಿಂದ ಎಲ್ಲವುಗಳಲ್ಲಿಯೂ ಹಲವಾರು ಬಗೆಗಳಾಗುತ್ತಿವೆ. ಒಟ್ಟು, ೧೩೪೨೧೭೭೨೬ ಅಕ್ಷರವೃತ್ತಗಳಿವೆ.

ಆದರೆ ನಿಮಗೆ ಬಳಕೆಯಲ್ಲಿರುವುವು ಆರೆಂಟು ಮಾತ್ರ. ಅವುಗಳ ಲಕ್ಷಣಗಳನ್ನು ಸ್ವಲ್ಪದರಲ್ಲಿಯೇ ಹೇಳುವೆವು.

## ಉತ್ಪಲಮಾಲೆ

| ಭ | ರ | ಸ | ಭ | ಭ | ರ | ಲಗ |
|---|---|---|---|---|---|---|
| —∪∪ | —∪— | ∪∪∪ | —∪∪ | —∪∪ | —∩— | ∪— |
| ಉತ್ಪಲ | ಮಾಲೆ ಭಂ | ರಸಭ | ಭಂ ರ ಲ | ಗ್ರಂ ಗ್ರಹ | ·ದೊಳ್ ವಿರಾ | ಮದಿಂ |

**ಲಕ್ಷಣ:** ಪ್ರತಿ ಸಾಲಿನಲ್ಲಿ ೨೦ ಅಕ್ಷರಗಳು. ಕ್ರಮವಾಗಿ "ಭರನಭಭರ" ಎಂದು ೬ ಗಣಗಳು; ಮುಂದೆ ಲಘು ಮತ್ತು ಗುರು. ೯ನೆಯ ಸ್ಥಾನದಲ್ಲಿ ಯತಿ. ೨ನೆಯ ಸ ನದಲ್ಲಿ ತೋರಪ್ರಾಸ. ೪ ಸಾಲುಗಳಲ್ಲಿಯೂ ಇದೇ ಲಕ್ಷಣವಿರುವ ಸಮವೃತ್ತ.

ಉತ್ಪಲಮಾಲೆಯ ಮೊದಲನೆಯ ಗುರುವನ್ನು ಒಡೆದು ೨ ಲಘುಗಳನ್ನು ಮಾಡಿದರೆ ಚ ಪಕಮಾಲಾವೃತ್ತವಾಗುವುದು.

## ಚಂಪಕಮಾಲಾವೃತ್ತ

| ನ | ಜ | ಭ | ಜ | ಜ | ಜ | ರ |
|---|---|---|---|---|---|---|
| ∪∪∪ | ∪—∪ | —∪∪ | ∪ — ∪ | ∪—∪ | ∪—∪ | —∪— |
| ನಜಭ | ಜಜಂಜ | ರಂ ತ್ರಿದ | ಶದೊಳ್ ಯ | ತಿ ಪಂಚ | ಕ ಮಾಲೆ | ಯೊಪ್ಪುಗುಂ |

**ಲಕ್ಷಣ:** ೨೧ ಅಕ್ಷರಗಳ ೪ ಸಾಲಿನ ಸಮವೃತ್ತ. ಪ್ರತಿ ಪಾದದಲ್ಲಿ ಕ್ರಮವಾಗಿ " ಜಭಜಜಜರ " ೭ ಗಣಗಳು. ೧೩ನೆಯ ಸ್ಥಾನದಲ್ಲಿ ಯತಿ. ೨ನೆಯ ಸ್ಥಾನದಲ್ಲಿ ತೆ :ರಪ್ರಾಸ.

## ಶಾರ್ದೂಲವಿಕ್ರೀಡಿತವೃತ್ತ

| ಮ | ಸ | ಜ | ಸ | ತ | ತ | ಗ |
|---|---|---|---|---|---|---|
| ——— | ∪∪— | ∪—∪ | ∪∪— | ——∪ | ——∪ | — |
| ಸೂರ್ಯಸ್ಥಂ | ಯತಿ ಮಂ | ಸಜಂ ಸ | ತತಗಂ | ಶಾರ್ದೂಲ | ವಿಕ್ರೀಡಿ | ತಂ |

**ಲಕ್ಷಣ:** ಪ್ರತಿ ಪಾದದಲ್ಲಿ ೧೯ ಅಕ್ಷರಗಳನ್ನುಳ್ಳ ಸಮವೃತ್ತ. ಕ್ರಮವಾಗಿ "ಮಸಜ ಸ: ತ" ಗಣಗಳೂ ಮೇಲೊಂದು ಗುರುವೂ; ೧೨ನೆಯ ಸ್ಥಾನಕ್ಕೆ ಯತಿ; ದ್ವಿತೀಯದಲ್ಲಿ ತೆ: 'ರಪ್ರಾಸ.

ಈ ವೃತ್ತದ ಮೊದಲು ಗುರುವನ್ನು ಒಡೆದು ೨ ಲಘುಗಳನ್ನು ಮಾಡಿದರೆ ಮತ್ತೇಭ ವಿ: ೀಡಿತವೃತ್ತವಾಗುವುದು.

## ಮತ್ತೇಭವಿಕ್ರೀಡಿತವೃತ್ತ

| ಸ | ಭ | ರ | ನ | ಮ | ಯ | ಲ ಗ |
|---|---|---|---|---|---|---|
| ∪∪— | —∪∪ | —∪— | ∪∪∪ | ——— | ∪—— | ∪— |
| ಕರದೊಳ್ | ನಿಲ್ಕೆ ಸ | ಭಂರನಂ | ಮ ಯ ಲ | ಗಂ ಮತ್ತೇ | ಭ ವಿಕ್ರೀ | ಡಿತಂ। |

**ಲಕ್ಷಣ:** ೨೦ ಅಕ್ಷರಗಳ ಸಮವೃತ್ತ. ಸಾಲಿನಲ್ಲಿ "ಸಭರನಮಯ" ೬ ಗಣಗಳು, ಮೆ ಲೆ ಲಘು ಗುರುಗಳು. ೧೩ಕ್ಕೆ ಯತಿ. ದ್ವಿತೀಯದಲ್ಲಿ ತೋರಪ್ರಾಸ.

ಅಳಿಕುಲ ಮಿಂದ್ರನೀಲಮಣಿ, ಪಕ್ಷಿಕಸುರ್ಮಿಡಿ........; ಸಿಟ್ಟುಬೆಂಕಿ, ತಪೋಧನಂ, ಭೀಮ ಕೌರವರಿಗೆ ಪ್ರತ್ಯಕ್ಷ ಯಮ.

ಈ ಉದಾಹರಣದಲ್ಲಿ 'ಇದು ಅದೇ' ಎಂಬ ತದ್ರೂಪತೆಯೂ ಗುಣಧರ್ಮಗಳಿಂದ ಅಭೇದವೂ ತೋರುತ್ತಿವೆ. ಆದುದರಿಂದ ಇದು ರೂಪಕದ ಉದಾಹರಣ.

ಪ್ರಸ್ತುತದೊಳೊಗೆದ ಮುಂಬೆಳಗಮಲದಂತಿಗ |
ಭಸ್ತಿ ನವಪೂರ್ವ ಸಂಧ್ಯಾರುಣಂ ಭಾಳವಿ |
ನ್ಯಸ್ತ ಸಿಂದೂರಮಂಕುರಿಪ ಪೊಂಬಿಸಿಲೊಡನೆ ಮೂಡುವೆಳನೇಸರೆಸೆವ |
ಮಸ್ತಕದ ಮಣಿಮುಕುಟ ಮಾಗಲುದಯಾಚಲದ |
ವಿಸ್ತಾರದಂತೆ ಭದ್ರಾಕೃತಿಯೊಳುಪ್ಪುವ ಸ |
ಮಸ್ತಸಿದ್ಧಿ ಪ್ರದಾಯಕ ವಿನಾಯಕ ಮಾಳ್ಪುದೆಮಗೆ ನಿರ್ವಿಘ್ನತೆಯನು ||

ಈ ಪದ್ಯದಲ್ಲಿ ರೂಪಕಾಲಂಕಾರವನ್ನು ವಿವರಿಸಿರಿ.

ರೂಪಕ ಅಲಂಕಾರದಲ್ಲಿ, ಸಾಕ್ಷಾತ್, ಪ್ರತ್ಯಕ್ಷ, ಇರವು, ಆಗಲು ಮುಂತಾದವು ಅಭೇದ ರೂಪಕವನ್ನು ಹೇಳಲು ಬರುವುವು.

## ಉತ್ಪ್ರೇಕ್ಷಾಲಂಕಾರ

ಸಂಭಾವನಾ ಸ್ಯಾತ್ ಉತ್ಪ್ರೇಕ್ಷಾ

ಉಪಮೇಯವು ಉಪಮಾನವೇನೋ ಎಂದು ಬಣ್ಣಿಸುವುದಾಗಲಿ, ಕಾರಣವಲ್ಲದುದನ್ನು ಕಾರಣವೆಂದು ಕಲ್ಪಿಸುವುದಾಗಲಿ ಉತ್ಪ್ರೇಕ್ಷಾಲಂಕಾರ.

ಕಗ್ಗತ್ತಲೆಯು, ಮುಗಿಲಿನಿಂದ ಕಾಡಿಗೆ ಸುರಿವುದೋ ಎನುವಂತೆ, ದಟ್ಟವಾಗಿ ಬಿದ್ದಿತ್ತು. ಜನರೆಲ್ಲ ರಾತ್ರಿ ರಾಕ್ಷಸಿಗಂಜಿರುವರೋ ಎನುವಂತೆ ಸದ್ದಿಲ್ಲದೆ ಮಲಗಿದ್ದರು.

ಕುದ್ದಾಲಹತಿಯನುರೆ ತಾಳ್ದೆಮ್ಮನಿನ್ನೆಗಂ |
ಮುದ್ದುಗೈದೀವಸುಧೆ ಬೆಳೆಯಿಸಿದಳೆಂದು ತುರು |
ಗಿದ್ದ ತನಿವಣ್ಗಳಿಂದೆಸೆವ ಪೆರ್ಗೊನೆಗಳಂ ಸಲೆ ಸಮರ್ಪಿಸಲೊಡರ್ಚಿ |
ಎದ್ದಿರದೆ ಬಾಗಿದುವೊ ಕದಳಿಗಳ್ಧರಣಿಗೆನಲ್........

ಉಪಮಾನವಾಚಕ ಪದಗಳ ಮುಂದೆ ಬರಬಹುದಾದ ಓ, ಏನೋ, ಎನೆ, ಎಂಬಂದದಿಂ, ಎಂಬವೊಲ್ ಮುಂತಾದ ವಾಚಕಗಳೇ ಈ ಅಲಂಕಾರವನ್ನು ತಾತ್ಕಾಲಿಕವಾಗಿ ಗುರುತಿಸುವ ಹೆಗ್ಗುರುತುಗಳು. **ಉಪಮಾಲಂಕಾರದಲ್ಲಿ ಉಪಮಾನವು ಸುಪ್ರಸಿದ್ಧವಾಗಿರುವುದು. ಉತ್ಪ್ರೇಕ್ಷೆಯಲ್ಲಿ ಅದು ಕವಿ ಕಲ್ಪಿತವಾಗಿರುವುದು.** ಇದನ್ನು ತಿಳಿದು **ಕೊಂಡು**, ವಾಚಕ ಪದಗಳಿಂದ ಅಲಂಕಾರವನ್ನು ನಿರ್ಣಯಿಸಬೇಕು.

## ಸ್ವಭಾವೋಕ್ತಿ ಅಲಂಕಾರ

ಸ್ವಭಾವೋಕ್ತಿಃ ಸ್ವಭಾವಸ್ಯ ಜಾತ್ಯಾದಿಸ್ಥಸ್ಯ ವರ್ಣನಮ್ ||

ಜಾತಿ ಕ್ರಿಯಾದಿಗಳಿಂದ ವಸ್ತುವನ್ನು ಇದ್ದಕ್ಕಿದ್ದ ರೀತಿಯಲ್ಲಿ ಬೆಡಗಿನಿಂದ ಬಣ್ಣಿಸು ದು ಸ್ವಭಾವೋಕ್ತಿ ಅಲಂಕಾರ.

ಕೃಷ್ಣ ಕೊಳಲನ್ನು ಬಾರಿಸುತ್ತಲೇ ಗೋವುಗಳು ಕಿವಿಗಳನ್ನು ನಿಮಿರಿಸಿಕೊಂಡು, ಣ್ಣುಗಳನ್ನು ಪಿಳುಕಿಸದೆ, ಬಾಲವನ್ನೆತ್ತಿಕೊಂಡು ಪುಟನೆಗೆಯುತ್ತ ಅತ್ತಕಡೆ ಓಡುತ್ತಿದ್ದುವು.

ಅರೆಮುಗಿದಿರ್ದ ಕಣ್ಗಳು ಮುಲರ್ದ ಮೊಗಂ ಕಡಿವೋದ ಕೈಯುಮಾ |
ಸುರತರಮಾಗೆ ಕರ್ಚಿದವುಡುಂ ಬೆರಸಸ್ತ್ರ ಶರ ಪ್ರಹಾರ ಜ |
ರ್ಜರಿತ ಶರೀರನಾಗಿ ನವಲೋಹಿತ ವಾರ್ಧಿಯೊಳಲ್ಲಿ ಬಿಳ್ದನಂ |
ಕುರುಪತಿ ನೋಡಿ ಕಂಡನಭಿಮನ್ಯು ಕುಮಾರನನಾಜಿವೀರನಂ ||

ಅಭಿಮನ್ಯು ರಣದಲ್ಲಿ ಮಡಿದಾಗ ಕೌರವ ಅವನ ದೇಹವನ್ನು ಈ ರೀತಿಯಾಗಿ ಡನೆಂದು ಕವಿ ಬೆಡಗಿನಿಂದ ಬಣ್ಣಿಸಿದ್ದಾನೆ.

## ಅತಿಶಯೋಕ್ತಿ ಅಲಂಕಾರ

(ಅ) ಯಾವುದೊಂದನ್ನು ಅತಿಶಯವಾಗಿ ಬಣ್ಣಿಸುವುದು ಅತಿಶಯೋಕ್ತಿ ಅಲಂಕಾರ.

ಈ ಮರಗಳು ಮುಗಿಲನ್ನು ಮುದ್ದಿಡುತ್ತಿವೆ.

ಮೇಲೆ ನಿಚ್ಚಮುಂ ಪರಿವ ದಿನಮಣಿಯ ಮಣಿರಥದ |
ಗಾಲಿಗಳ ನೇಮುಗಳ ಕೊಯ್ಲಿಂದೆ ಪುಡಿವಡೆದ |
ಸಾಲಹೊಂಗೋಂಟೆದೆನೆ ಗೊನೆಗಳಿಂದೇಳ್ವ ಧೂಳು........

(ಆ) ವೈಶಿಷ್ಟ್ಯವನ್ನು ವರ್ಣಿಸುವಲ್ಲಿಯೂ ಅತಿಶಯೋಕ್ತಿ ಅಲಂಕಾರವಾಗುವುದು.

ಆತನ ರೀತಿಯೇ ಬೇರೆ; ಆತನ ಮಾತೇ ಬೇರೆ; ಆತನ ನಡೆಯೇ ಬೇರೆ; ನುಡಿಯೇ ರೆ ಮುಂತಾಗಿ.

## ಶ್ಲೇಷಾಲಂಕಾರ

ಅಡ್ಡಗೋಡೆಯ ಮೇಲೆ ದೀಪವನ್ನಿಟ್ಟಂತೆ, ಎರಡು ಬಗೆಯ ಅರ್ಥಗಳನ್ನು ಕೊಡುವ ್ಗಳನ್ನು ಪ್ರಯೋಗಿಸುವುದು ಶ್ಲೇಷ ಅಲಂಕಾರ.

ನೀರಂ ನೀಂ....ನಿನ್ನಪಾಲ್ಗಡಾ ಭೈಮಿವಲಂ | ನೀರಕ್ಷೀರ ವಿಭೇದಕ | ನೀರಾಜ ರಾಳನೊಂದಿಸಿತ್ತು........

ಇಲ್ಲಿ– ನೀರಂ: ಪ್ರಿಯಪುರುಷ, ನೀರು, ಎಂದೂ; ಪಾಲ್: ಹಾಲು, ಭಾಗ ಎಂದೂ ಡರ್ಥವಿದೆ.

ಪಾರದೆ ಪರಾರ್ಥಮಂ ವರಯತಿಗೆ ಭಂಗಮಂ ತಾರದೆ। ........ಪರಾರ್ಥ: ಹೆರವರ ಸಂಪತ್ತು, ಹೆರವರ ಅಭಿಪ್ರಾಯ; ವರಯತಿ: ಶ್ರೇಷ್ಠರಾದ ಯತಿಗಳು, ಪದ್ಯದಲ್ಲಿಯ ಯತಿ ಸ್ಥಾನ. ವರವರ್ಣದಿಂದೆ ಶೋಭಿತಮಾಗಿ ರೂಪವಿ। ಸ್ವರದಿಂದೆ ಚೆಲ್ವಾಗಿ ....ಷಟ್ಪದಿಗಳು ಝೇಂಕರಿಪುವು. ವರವರ್ಣ: ಒಳ್ಳೆಯ ಅಕ್ಷರ, ಒಳ್ಳೆಯ ಬಣ್ಣ. ಷಟ್ಪದಿ: ಷಟ್ಪದೀಪದ್ಯ ಮತ್ತು ಭ್ರಮರಗಳು.

## — ಬಳಕೆ ಮತ್ತು ಕೇಳಿಕೆ —

೧. ಕೆಳಗಿನ ಪದ್ಯಗಳಲ್ಲಿಯ ಅಲಂಕಾರಗಳನ್ನು ಹೇಳಿರಿ.

ನಲಿದು ಸಂಗೀತ ಸಮುದ್ರವ ಹೊಕ್ಕು ಮು।
ಕ್ಕಳಿಸಿ ಮುತ್ತುಗಳುವಂದದಲಿ।
ಗಳ ತುಂಬ ಗಾನವ ತೆಗೆದು ಬಾಯ್ದೆರೆಯೊಳು।
ಸುಳುಹುಗಾಣಿಸಿದರೋಜೆಯನು।
................ವಿವಿಧವೈಭವದಿಂದ।
ಶಶಿಧರನ ಕಳೆಯೊಳು ರಾಘವಾತ್ಮಜರ್ ದಿನದಿನಕೆ ವರ್ಧಿಸಿದರು॥
ಲಲನೆಯರ ಕೋಮಲಾವಯವ ಲಾವಣ್ಯಮಂ।
ಸಲೆಕಂಡು ಮನಮೆಚ್ಚಿ ಮನಮುಳಿಗಿದಾನಂದದಿಂ।
ತಲೆದೂಗುವರ್ಪರ್ಥಿಕರಾಗನೀರ್ಗೆ ತಣಿವನೆವದಿಂದಮಾಜನಪದದೊಳು॥
ನಡುವುಡಿವನ್ನ ಮೇರಿ ಬರೆಯುಲ್ವುಡಿವನ್ನೆಗಮೊತ್ತಿ ಮೆಟ್ಟಿಮೆ।
ಯ್ಯಡಗಡಗಾಗೆ ಮುನ್ನುರಮುನಿರ್ಬಗಿಯಾಗಿರೆ ಪೋಳ್ದು ನೆತ್ತರಂ।
ಕುಡಿಕುಡಿದಾರ್ದ ವೈರಿಯುಳಿದನ್ನೆಗಮೆನ್ನಳಲೆಂತು ಪೋಕುಮೆಂ।
ದಡಿಗಡಿಗಳ್ಕು ತನ್ನಣುಗದಮ್ಮನನೀಕ್ಷಿಸಿದಂ ಸುಯೋಧನಂ।
ಶಕ್ರನಾಸ್ಥಾನಮಂ ವಿವಿಧ ವೈಭವದಿಂದತಿಕ್ರಮಿಸುವರಸನೋಲಗಮಂ ಕಂಡರು.
ಆತನೋದದ ವೇದಶಾಸ್ತ್ರ ಸ। ಮೇತವಾತನ ನಾಲಗೆಯ ತುದಿ।
ಗಾತು ಬೆಸನನು ಬೇಡುತಿಹವಾತನ ಪದಾಬ್ಜದಲಿ॥
ಎನಿಸುಜನಮಿರ್ದೊಡಂ ತ್ರಿದಶಜನಕಾವಾಸ।
ಮೆನಿಪುದಮರಾವತೀ ಪತ್ತನಂ; ........।
ಹರಿಯಂತೆ ಬಲಯುತಂ ಶಿವನಂತೆ ರಾಜಶೇ।
ಖರನಬ್ಜಭವನಂತೆ ಚತುರಾನನಂ........

೨. ಸ್ವಭಾವೋಕ್ತಿ ಅಲಂಕಾರವೆಂದರೇನು? ಇದ್ದುದನ್ನು ಇದ್ದಂತೆ ಹೇಳುವಲ್ಲಿಯೂ ಅಲಂಕಾರವಿರುವುದು ಹೇಗೆ? ಲಕ್ಷಣದಲ್ಲಿ ಸಮನ್ವಯಿಸಿ ತೋರಿಸಿರಿ.

೩. ಉಪಮಾಲಂಕಾರವೆಂದರೇನು? ಉತ್ಪ್ರೇಕ್ಷಾಲಂಕಾರವೆಂದರೇನು? ಅವುಗಳ ವಾಚಕ ಶಬ್ದಗಳಲ್ಲಿ ಹೋಲಿಕೆ ತೋರುತ್ತಿದ್ದರೂ ಅವುಗಳನ್ನು ವಿಂಗಡಿಸುವುದು ಹೇಗೆ?

೪. ರೂಪಕಾಲಂಕಾರವೆಂದರೇನು? ಅದನ್ನು ಗುರುತಿಸುವ ವಾಚಕಗಳಾವುವು?

೫. ಅತಿಶಯೋಕ್ತಿ ಅಲಂಕಾರವೆಂದರೇನು? ಉದಾಹರಣ ಕೊಡಿರಿ.

೬. ಶ್ಲೇಷಾಲಂಕಾರವೆಂದರೇನು? ಉದಾಹರಿಸಿರಿ.

# ವಿವಿಧ ಸಾಹಿತ್ಯ

## ೧. ಪರಿಚ್ಛೇದ ರಚನೆ

### (ಅ) ಸಾಮಾನ್ಯ ವಿಷಯ ವಿಸ್ತರ

#### ಬಾನುಲಿಯ ಬಳಕೆ

ಬಾನುಲಿ ಎಂದರೆ ಆಕಾಶವಾಣಿ ಅಥವಾ ರೇಡಿಯೋ. ಇದು ಇಪ್ಪತ್ತನೆಯ ಶತ ಮ ನದ ಎಂಟನೆಯ ಆಶ್ಚರ್ಯವೆನುವಂತಿದೆ. ವಿಶ್ವದಲ್ಲಿ ತಾನೇ ತಾನಾಗಿ ಹರಿಯುವ ಈ ರವಾಯುವೇ ಈ ಬಾನುಲಿಯ ವಾಹನ. ಈ ಯಂತ್ರಶೋಧದಿಂದ ವಿಶ್ವವೆಲ್ಲ ಒ ನಾಗುತ್ತಿದೆ. ಖಂಡಖಂಡಗಳ ಭೇದವಳಿಯುತ್ತಿದೆ; ಜಗತ್ತೆಲ್ಲ ನಿಮಿಷಾರ್ಧದಲ್ಲಿ ಒಂದಾಗಿ ಬ ತ್ತಿದೆ. ಅಮೇರಿಕೆಯ ಅಧ್ಯಕ್ಷನು ಆಕಾಶವಾಣಿ ಕೇಂದ್ರದಲ್ಲಿ ಮಾತನಾಡುತ್ತಿದ್ದರೆ, ಅ ನ್ನು ನಾವು ಭಾರತದಲ್ಲಿ ಕುಳಿತೇ ಕಣ್ಣೆದಿರಿಗಿದ್ದಂತೆ ಕೇಳಬಹುದು. ಈ ರೇಡಿಯೋದಲ್ಲಿ ಬ ವ ಬಗೆಬಗೆಯ ವಾರ್ತೆಗಳಿಂದ ಎಲ್ಲರಿಗೂ ತಮ್ಮ ತಮ್ಮ ಉದ್ಯೋಗಗಳ, ಸ್ಥಿತಿಗತಿಗಳ ಅ ನಾಗುತ್ತಿದೆ; ಸಂಗೀತ, ನಾಟಕ, ವಿನೋದಗಳಿಂದ ಮನಸ್ಸು ಅರಳುತ್ತಿದೆ; ಹೃದಯ. ಹಿ ತ್ತಿದೆ. ಹೀಗೆ ಬಾನುಲಿಯ ಬಳಕೆ ವಿಶ್ವಬಾಂಧವ್ಯ, ಜ್ಞಾನದಾನ, ಆನಂದ ಸಂವರ್ಧನ ಗ ತ್ರಿವೇಣೀ ಸಂಗಮವಾಗಿದೆಯೆಂದು ಧಾರಳವಾಗಿ ಹೇಳಬಹುದು.

#### ಜಾಗತಿಕ ಶಾಂತಿ ಸಾಧ್ಯವೇ ?

ಇಂದಿನ ಜಗತ್ತಿನಲ್ಲಿ ದಿನ ಬೆಳಗಾದರೆ ಹೊಸ ಹೊಸ ಹೋರಾಟಗಳು ಆರಂಭವಾಗು ತ್ತಿ ಕ್ಷಣಕ್ಷಣಕ್ಕೆ ಮಹಾಯುದ್ಧದ ಭೀಕರತೆ ಕಣ್ಣು ಮುಂದೆ ನಿಲ್ಲುತ್ತಿದೆ. ಪ್ರಬಲರಾಷ್ಟ್ರ ಗ ಮುಂದಾಳುಗಳು ಜಾಗತಿಕ ಶಾಂತಿ ಶಾಂತಿಯೆಂದು ವಿಚಾರವಿನಿಮಯ ಮಾಡುತ್ತಿದ್ದಾರೆ; ಮ ್ರ ಒಮ್ಮೆಯೂ ಒಮ್ಮತಕ್ಕೆ ಬಂದಿಲ್ಲ. ಎಂದಮೇಲೆ, ಜಾಗತಿಕ ಶಾಂತಿ ಸಾಧ್ಯವೇ ಎಂ ಆಕಾಂಕ್ಷೆಗೆ ಇಲ್ಲವೆಂದೇ ಉತ್ತರಕೊಡಬೇಕಾಗುತ್ತಿದೆ. ಆದರೆ ಇದು ನಿತಾಂತ ಸತ್ಯ ವಲ್ಲ ಹಿಡಿದ ಹಾದಿ ತಪ್ಪಾಗಿದೆ. ಎಂತೆಯೇ ಮುಟ್ಟುವ ಗುರಿ ಮರೆಯಾಗುತ್ತಲಿದೆ. ಒಳ ಸಾಮ್ರಾಜ್ಯ ದಾಹ; ಹೊರಗೆ ಶಾಂತಿ ಸಂಧಾನದ ಮಾತಿನ ಮೋಹ. ಒಳಗೆ ಶಸ್ತ್ರ ಸಂ ಹದ ವಿಕಾಸ; ಹೊರಗೆ ಮಾತಿನ ಮ ಟ್ಟಿಗೆ ಶಸ್ತ್ರ ಸಂನ್ಯಾಸ. ಇದಕ್ಕೆಲ್ಲ, ಮಾನವನು ಆಧ ತ್ಮವಾದವನ್ನು ಮರೆತು ಭೌತಿಕದ ಬೆನ್ನಟ್ಟಿರುವುದೇ ಕಾರಣ. ಶ್ರಮವೊಂದು ಕಡೆಗೆ, ಸಂ ಕ ಮತ್ತೊಂದೆಡೆಗೆ ಆಗಿರುವುದೇ ಈ ವಿದ್ರೋಹದ ಮೂಲ. ಎಲ್ಲರೂ ಕಾಯಕವೇ ಕೈಲ ಸ ಎಂಬದನ್ನು ನಿತ್ಯಾಚರಣೆಯಲ್ಲಿ ತಂದರೆ, ಕೊಲ್ಲದಿಪ್ಪುದೆ ಧರ್ಮ ಎಂಬುದನ್ನು ನಡೆ ನುಡಿಗಳಲ್ಲಿ ಅಳವಡಿಸಿಕೊಂಡರೆ ವಿಶ್ವಶಾಂತಿಗೆ ವಿಲಂಬವೆಲ್ಲಿ ?

ಪಾರದೆ ಪರಾರ್ಥಮಂ ವರಯತಿಗೆ ಭಂಗವಂ ತಾರದೆ। ........ಪರಾರ್ಥ: ಹೆರವರ ಸಂಪತ್ತು, ಹೆರವರ ಅಭಿಪ್ರಾಯ; ವರಯತಿ: ಶ್ರೇಷ್ಠರಾದ ಯತಿಗಳು, ಪದ್ಯದಲ್ಲಿಯ ಯತಿ ಸ್ಥಾನ. ವರವರ್ಣದಿಂದೆ ಶೋಭಿತವಾಗಿ ರೂಪವಿ। ಸ್ವರದಿಂದೆ ಚೆಲ್ವಾಗಿ ....ಷಟ್ಪದಿಗಳು ಝೇಂಕರಿಪುವು. ವರವರ್ಣ: ಒಳ್ಳೆಯ ಅಕ್ಷರ, ಒಳ್ಳೆಯ ಬಣ್ಣ. ಷಟ್ಪದಿ: ಷಟ್ಪದೀಪದ್ಯ ಮತ್ತು ಭ್ರಮರಗಳು.

## — ಬಳಕೆ ಮತ್ತು ಕೇಳಿಕೆ —

೧. ಕೆಳಗಿನ ಪದ್ಯಗಳಲ್ಲಿಯ ಅಲಂಕಾರಗಳನ್ನು ಹೇಳಿರಿ.

ನಲಿದು ಸಂಗೀತ ಸಮುದ್ರವ ಹೊಕ್ಕು ಮು।
ಕ್ಕಳಿಸಿ ಮುತ್ತುಗಳುವಂದದಲಿ।
ಗಳ ತುಂಬ ಗಾನವ ತೆಗೆದು ಬಾಯ್ದೆರೆಯೊಳು।
ಸುಳುಹುಗಾಣಿಸಿದರೋಜೆಯನು।
................ವಿವಿಧವೈಭವದಿಂದ।
ಶಶಿಧರನ ಕಳೆಯೊಳು ರಾಘವಾತ್ಮಜರ್ ದಿನದಿನಕೆ ವರ್ಧಿಸಿದರು ।
ಲಲನೆಯರ ಕೋಮಲಾವಯವ ಲಾವಣ್ಯಮಂ।
ಸಲೆಕಂಡು ಮನಮೆಚ್ಚಿ ಮನಮುಳಿಗಿದಾನಂದದಿಂ।
ತಲೆದೂಗುವರ್ಪರ್ಥಿಕರಾಗನೀರ್ಗೆ ತಣಿವನೆವದಿಂದಮಾಜನಪದದೊಳು॥
ನಡುವುಡಿವನ್ನ ಮೇರಿ ಬರೆಯಲ್ವುಡಿವನ್ನೆಗವೊತ್ತಿ ಮೆಟ್ಟಿಮೆ।
ಯ್ಯಡಗಡಗಾಗೆ ಮುನ್ನುರಮುನಿರ್ಬಗಿಯಾಗಿರೆ ಪೋಳ್ದು ನೆತ್ತರಂ।
ಕುಡಿಕುಡಿದಾರ್ದ ವೈರಿಯುಳಿದನ್ನೆಗಮೆನ್ನಳಲೆಂತು ಪೋಕುಮೆಂ।
ದಡಿಗಡಿಗಳ್ಕಿ ತನ್ನಣುಗದಮ್ಮನನೀಕ್ಷಿಸಿದಂ ಸುಯೋಧನಂ।
ಶಕ್ರನಾಸ್ಥಾನಮಂ ವಿವಿಧ ವೈಭವದಿಂದತಿಕ್ರಮಿಸುವರಸನೋಲಗಮಂ ಕಂಡರು.
ಆತನೋದದ ವೇದಶಾಸ್ತ್ರ ಸ। ಮೇತವಾತನ ನಾಲಗೆಯ ತುದಿ।
ಗಾತು ಬೆಸನನು ಬೇಡುತಿಹವಾತನ ಪದಾಬ್ಜದಲಿ॥
ಎನಿಸುಜನಮಿರ್ದೊಡಂ ತ್ರಿದಶಜನಕಾವಾಸ।
ಮೆನಿಪುದಮರಾವತೀ ಪತ್ತನಂ; ........।
ಹರಿಯಂತೆ ಬಲಯುತಂ ಶಿವನಂತೆ ರಾಜಶೇ।
ಖರನಬ್ಜಭವನಂತೆ ಚತುರಾನನಂ........

೨. ಸ್ವಭಾವೋಕ್ತಿ ಅಲಂಕಾರವೆಂದರೇನು? ಇದ್ದುದನ್ನು ಇದ್ದಂತೆ ಹೇಳುವಲ್ಲಿಯೂ ಅಲಂಕಾರವಿರುವುದು ಹೇಗೆ? ಲಕ್ಷಣದಲ್ಲಿ ಸಮನ್ವಯಿಸಿ ತೋರಿಸಿರಿ.

೩. ಉಪಮಾಲಂಕಾರವೆಂದರೇನು? ಉತ್ಪ್ರೇಕ್ಷಾಲಂಕಾರವೆಂದರೇನು? ಅವುಗಳ ವಾಚಕ ಶಬ್ದಗಳಲ್ಲಿ ಹೋಲಿಕೆ ತೋರುತ್ತಿದ್ದರೂ ಅವುಗಳನ್ನು ವಿಂಗಡಿಸುವುದು ಹೇಗೆ?

೪. ರೂಪಕಾಲಂಕಾರವೆಂದರೇನು? ಅದನ್ನು ಗುರುತಿಸುವ ವಾಚಕಗಳಾವುವು?

೫. ಅತಿಶಯೋಕ್ತಿ ಅಲಂಕಾರವೆಂದರೇನು? ಉದಾಹರಣ ಕೊಡಿರಿ.

೬. ಶ್ಲೇಷಾಲಂಕಾರವೆಂದರೇನು? ಉದಾಹರಿಸಿರಿ.

# ವಿವಿಧ ಸಾಹಿತ್ಯ

## ೧. ಪರಿಚ್ಛೇದ ರಚನೆ

### (ಅ) ಸಾಮಾನ್ಯ ವಿಷಯ ವಿಸ್ತರ

#### ಬಾನುಲಿಯ ಬಳಕೆ

ಬಾನುಲಿ ಎಂದರೆ ಆಕಾಶವಾಣಿ ಅಥವಾ ರೇಡಿಯೋ. ಇದು ಇಪ್ಪತ್ತನೆಯ ಶತಮಾನದ ಎಂಟನೆಯ ಆಶ್ಚರ್ಯವೆನುವಂತಿದೆ. ವಿಶ್ವದಲ್ಲಿ ತಾನೇ ತಾನಾಗಿ ಹರಿಯುವ ಈಥರವಾಯುವೇ ಈ ಬಾನುಲಿಯ ವಾಹನ. ಈ ಯಂತ್ರಶೋಧದಿಂದ ವಿಶ್ವವೆಲ್ಲ ಒಂದಾಗುತ್ತಿದೆ. ಖಂಡಖಂಡಗಳ ಭೇದವಳಿಯುತ್ತಿದೆ; ಜಗತ್ತೆಲ್ಲ ನಿಮಿಷಾರ್ಧದಲ್ಲಿ ಒಂದಾಗಿ ಬಿಡುತ್ತಿದೆ. ಅಮೇರಿಕೆಯ ಅಧ್ಯಕ್ಷನು ಆಕಾಶವಾಣಿ ಕೇಂದ್ರದಲ್ಲಿ ಮಾತನಾಡುತ್ತಿದ್ದರೆ, ಅದನ್ನು ನಾವು ಭಾರತದಲ್ಲಿ ಕುಳಿತೇ ಕಣ್ಣೆದಿರಿಗಿದ್ದಂತೆ ಕೇಳಬಹುದು. ಈ ರೇಡಿಯೋದಲ್ಲಿ ಬರುವ ಬಗೆಬಗೆಯ ವಾರ್ತೆಗಳಿಂದ ಎಲ್ಲರಿಗೂ ತಮ್ಮ ತಮ್ಮ ಉದ್ಯೋಗಗಳ, ಸ್ಥಿತಿಗತಿಗಳ ಅರಿವಾಗುತ್ತಿದೆ; ಸಂಗೀತ, ನಾಟಕ, ವಿನೋದಗಳಿಂದ ಮನಸ್ಸು ಅರಳುತ್ತಿದೆ; ಹೃದಯ ಹಿಗ್ಗುತ್ತಿದೆ. ಹೀಗೆ ಬಾನುಲಿಯ ಬಳಕೆ ವಿಶ್ವಬಾಂಧವ್ಯ, ಜ್ಞಾನದಾನ, ಆನಂದ ಸಂವರ್ಧನಗಳ ತ್ರಿವೇಣೀ ಸಂಗಮವಾಗಿದೆಯೆಂದು ಧಾರಾಳವಾಗಿ ಹೇಳಬಹುದು.

#### ಜಾಗತಿಕ ಶಾಂತಿ ಸಾಧ್ಯವೇ ?

ಇಂದಿನ ಜಗತ್ತಿನಲ್ಲಿ ದಿನ ಬೆಳಗಾದರೆ ಹೊಸ ಹೊಸ ಹೋರಾಟಗಳು ಆರಂಭವಾಗುತ್ತಿವೆ. ಕ್ಷಣಕ್ಷಣಕ್ಕೆ ಮಹಾಯುದ್ಧದ ಭೀಕರತೆ ಕಣ್ಣು ಮುಂದೆ ನಿಲ್ಲುತ್ತಿದೆ. ಪ್ರಬಲರಾಷ್ಟ್ರಗಳ ಮುಂದಾಳುಗಳು ಜಾಗತಿಕ ಶಾಂತಿ ಶಾಂತಿಯೆಂದು ವಿಚಾರವಿನಿಮಯ ಮಾಡುತ್ತಿದ್ದಾರೆ; ಮಾತ್ರ ಒಮ್ಮೆಯೂ ಒಮ್ಮತಕ್ಕೆ ಬಂದಿಲ್ಲ. ಎಂದಮೇಲೆ, ಜಾಗತಿಕ ಶಾಂತಿ ಸಾಧ್ಯವೇ ಎಂಬ ಆಕಾಂಕ್ಷೆಗೆ ಇಲ್ಲವೆಂದೇ ಉತ್ತರಕೊಡಬೇಕಾಗುತ್ತಿದೆ. ಆದರೆ ಇದು ನಿತಾಂತ ಸತ್ಯವಲ್ಲ. ಹಿಡಿದ ಹಾದಿ ತಪ್ಪಾಗಿದೆ. ಎಂತೆಯೇ ಮುಟ್ಟುವ ಗುರಿ ಮರೆಯಾಗುತ್ತಲಿದೆ. ಒಳಗೆ ಸಾಮ್ರಾಜ್ಯ ದಾಹ; ಹೊರಗೆ ಶಾಂತಿ ಸಂಧಾನದ ಮಾತಿನ ಮೋಹ. ಒಳಗೆ ಶಸ್ತ್ರಸಂಗ್ರಹದ ವಿಕಾಸ; ಹೊರಗೆ ಮಾತಿನ ಮಟ್ಟಿಗೆ ಶಸ್ತ್ರ ಸಂನ್ಯಾಸ. ಇದಕ್ಕೆಲ್ಲ, ಮಾನವನು ಅಧ್ಯಾತ್ಮವಾದವನ್ನು ಮರೆತು ಭೌತಿಕದ ಬೆನ್ನಟ್ಟಿರುವುದೇ ಕಾರಣ. ಶ್ರಮವೊಂದು ಕಡೆಗೆ, ಸಂಗ್ರಹ ಮತ್ತೊಂದೆಡೆಗೆ ಆಗಿರುವುದೇ ಈ ವಿದ್ರೋಹದ ಮೂಲ. ಎಲ್ಲರೂ ಕಾಯಕವೇ ಕೈಲಾಸ ಎಂಬದನ್ನು ನಿತ್ಯಾಚರಣೆಯಲ್ಲಿ ತಂದರೆ, ಕೊಲ್ಲದಿಪ್ಪುದೆ ಧರ್ಮ ಎಂಬುದನ್ನು ನಡೆ–ನುಡಿಗಳಲ್ಲಿ ಅಳವಡಿಸಿಕೊಂಡರೆ ವಿಶ್ವಶಾಂತಿಗೆ ವಿಲಂಬವೆಲ್ಲಿ ?

## (ಆ) ವಿಚಾರ ವಿಸ್ತರ

### ನಾಲಗೆ ಒಳ್ಳೆಯದಾದರೆ ನಾಡೆಲ್ಲ ಒಳ್ಳೆಯದು

'ಬೆಲ್ಲವಿಲ್ಲದಿದ್ದರೂ ಬೆಲ್ಲದಂತಹ ಮಾತುಗಳನ್ನು ಆಡು' ಎಂದು ಕನ್ನಡದಲ್ಲಿ ಗಾದೆಯಿದೆ. ಮಾತಿನಿಂ ನಡೆನುಡಿಯು, ಮಾತಿನಿಂ ಹಗೆ ಕೊಲೆಯು........ಮಾತೇ ಮಾಣಿಕವು, ಎಂದು ಸರ್ವಜ್ಞ ಕವಿ ಹೇಳುತ್ತಾನೆ. ಈ ಒಳ್ಳೆಯ ಮಾತುಗಳನ್ನು ಆಡುವುದನ್ನೇ 'ನಾಲಗೆ ಒಳ್ಳೆಯದಾದರೆ' ಎಂದು ಹೇಳಿದೆ. ಒಳ್ಳೆಯ ಮಾತಿನಿಂದ ಮೂಕ ಪ್ರಾಣಿಗಳು ಕೂಡ ಹೇಳಿದಂತೆ ಕೆಲಸ ಮಾಡುತ್ತಿವೆ. ನಮ್ಮ ಬಿರುಸು ಮಾತಿಗೆ ಪ್ರತಿಯಾಗಿ ಬಿರುಸು ಉತ್ತರವನ್ನು ಕೊಡುವುದು ನಿಸರ್ಗದ ನಿಯಮ. ಬಯಲಲ್ಲಿ ನಿಂತು ನಾವು ಆಡಿದ ಒಳಿತು ಕೆಡಕು ಮಾತುಗಳೇ ನಮಗೆ ಪ್ರತಿಧ್ವನಿಯಾಗಿ ಬರುತ್ತಿವೆ. ಇದನ್ನೇ ಸೂತ್ರ ರೂಪವಾಗಿ ಶ್ರೀ ಬಸವಣ್ಣನವರು 'ಅಯ್ಯಾ ಎಂದಡೆ ಸ್ವರ್ಗ, ಎಲವೊ ಎಂದಡೆ ನರಕ' ಎಂದು ಸಾರಿದ್ದಾರೆ. ಎಂದ ಮೇಲೆ, ತನಗೆ ನಾಡೆಲ್ಲ ಒಳಿತಾಗಿರಬೇಕೆನ್ನುವವನು ಮೊದಲು ತನ್ನ ನಾಲಗೆಯನ್ನು ಒಳಿತಾಗಿರಿಸಬೇಕಲ್ಲವೇ ?

### ಜ್ಞಾನದಿಂದಲೇ ಮಾನವನ ಮೇಲ್ಮೆ

ಬಾಳಿಬೆಳೆಯುತ್ತಿರುವ ವಸ್ತುಗಳಲ್ಲೆಲ್ಲ ಮಿದುಳಿನ ಅಂಶವಿದ್ದೇ ಇರುತ್ತಿದೆಯೆಂದು ಶಾಸ್ತ್ರಜ್ಞರು ಹೇಳುತ್ತಾರೆ. ಈ ದೃಷ್ಟಿಯಲ್ಲಿ ಮರ, ಮೂಕ ಪಶು–ಪಕ್ಷಿಗಳು–ಮಾನವ ಇವೆಲ್ಲ ಒಂದೇ ಮಾಲೆಯಲ್ಲಿಯ ಮಣಿಗಳಾಗಿರುವುವು. ಮುಟ್ಟಿದರೆ ಮುದುಡಿಕೊಳ್ಳುವ ವನಸ್ಪತಿಯನ್ನಾಗಲಿ, ಲತ್ತೆ ಬುತ್ತಿಗಳಿಗೆ ಕುಗ್ಗುವ ಹಿಗ್ಗುವ ಪಶುಪಕ್ಷಿಗಳನ್ನಾಗಲಿ, ಹೊಗಳಿಕೆ ತೆಗಳಿಕೆಗಳಿಗೆ ಮಾರು ಹೋಗುವ ಮನುಷ್ಯನನ್ನಾಗಲಿ ನೋಡಿದರೆ ಶಾಸ್ತ್ರಜ್ಞರ ಮಾತು ಸರಿಯೆನಿಸುವುದು. ಹಾಗಾದರೆ ಈ ಮೂರು ವರ್ಗದಲ್ಲಿ ಮಾನವನೊಬ್ಬನೇ ಜಗತ್ತನ್ನು ಒತ್ತಿ ಆಳುತ್ತಿರುವುದರ ಗುಟ್ಟೇನು ? ಜ್ಞಾನದ ಬಲವೇ ಮಾನವ ಬಲ. ಮರಗಳಲ್ಲಾಗಲಿ, ಮೂಕ ಪ್ರಾಣಿಗಳಲ್ಲಾಗಲಿ ಮಿದುಳಿದ್ದ ಮಾತ್ರಕ್ಕೆ ಜ್ಞಾನವಿದೆಯೆಂದು ಹೇಳಬರುವುದಿಲ್ಲ. ಕಚೇರಿಯ ಗಂಟೆಯಲ್ಲಿ ಹತ್ತು ಹೊಡೆಯುವ ಸದ್ದಾದಾಗ ಇದಿರಿಗಿದ್ದ ಮರಕ್ಕೆ ಅದೇನೆಂದು ಕೂಡ ತಿಳಿಯುವುದಿಲ್ಲ. ಮೂಕಪ್ರಾಣಿ ಅಲ್ಲಿದ್ದರೆ, ಅದು ಗಂಟೆಯ ಸಪ್ಪಳದತ್ತ ಕೊರಳಿ ನೋಡುವುದು, ಅಷ್ಟೇ. ಅದನ್ನೇ ಕಚೇರಿಯ ನೌಕರನಾಗಲಿ ಶಾಲೆಯ ವಿದ್ಯಾರ್ಥಿಯಾಗಲಿ ಕೇಳಿದರೆ, ಕೂಡಲೆ ತನ್ನ ಮುಂದಿನ ಊಟ–ಉಡಿಗೆಗಳನ್ನು ಕೈಕೊಳ್ಳುವನು. ಏಕೆಂದರೆ, ಅವರು ೧೧ ಘಂಟೆಗೆ ತಮ್ಮ ಕಾರ್ಯದಲ್ಲಿ ತೊಡಗಬೇಕು. ಈ ಕಾರ್ಯಕಾರಣಗಳ ಸಮನ್ವಯದ ತಿಳಿವಳಿಕೆಯೇ ಜ್ಞಾನ. ಇದು ಮಾನವನೊಬ್ಬನಲ್ಲಿಯೇ ಇದೆ. ಎಂತೆಯೇ ಜ್ಞಾನದಿಂದಲೇ ಮಾನವನ ಮೇಲ್ಮೆ, ಎಂದು ಹೇಳುವರು.

**ವಿಚಾರ:** ಪರಿಚ್ಛೇದ ರಚನೆಯ ಬಗೆಗೆ ಎಂಟನೆಯ ತರಗತಿಯಲ್ಲಿ ಕೆಲವು ಮಾತುಗಳನ್ನು ಹೇಳಿದ್ದೇವೆ. ಅವುಗಳನ್ನು ಮತ್ತೊಮ್ಮೆ ಮನನಮಾಡಿಕೊಳ್ಳಿರಿ. ಈ ಪಾಠದಲ್ಲಿ

'ಅ' ಭಾಗದೊಳಗೆ ಸಾಮಾನ್ಯ ವಿಷಯಗಳ ಬಗೆಗೂ 'ಆ' ಭಾಗದಲ್ಲಿ ವಿಚಾರವಿಸ್ತರದ ಬಗೆಗೂ ಎರಡು ಬಗೆಯ ಮಾದರಿಗಳಿವೆ. ಈ ಎರಡು ರೀತಿಗಳನ್ನೂ ನೀವು ಅಭ್ಯಾಸ ಮಾಡಬೇಕು. ಅದಕ್ಕಾಗಿ ಕೆಳಗಿನ ಮಾತುಗಳನ್ನು ನೆನಪಿಟ್ಟರೆ ಸಾಕು.

೧. ಕೊಟ್ಟ ವಿಷಯವನ್ನು ಸರಿಯಾಗಿ ವಿಚಾರ ಮಾಡಬೇಕು. ವಿಸ್ತರಕ್ಕೆ ಅವಶ್ಯವೆನಿಸಿದ ಸಂಗತಿಗಳನ್ನು ಕಲೆ ಹಾಕಬೇಕು

೨. ಹೇಳತಕ್ಕುದನ್ನೆಲ್ಲ ಹೊಂದಿಕೆಯಿಂದ ಸಂಕ್ಷೇಪವಾಗಿಯೇ ಹೇಳಬೇಕು.

೩. ಪರಿಚ್ಛೇದದ ಆರಂಭ ಆಕರ್ಷಕವಾಗಿರಬೇಕು; ಮುಕ್ತಾಯದಲ್ಲಿ, ಕೊಟ್ಟ ವಿಷಯ ಕೊನೆಗೊಂಡಿರಬೇಕು.

### — ಬಳಕೆ ಮತ್ತು ಕೇಳಿಕೆ —

೧. ಕೆಳಗಿನ ವಿಷಯಗಳನ್ನು ಕುರಿತು ಒಂದೊಂದು ಪರಿಚ್ಛೇದವನ್ನು ಬರೆಯಿರಿ.
ನಡುಹಗಲಿನ ಬಿಸಿಲು, ಮುಳುಗುವ ಸೂರ್ಯ, ಮೋಟಾರ ಅಪಘಾತ, ತುಂಬಿ ಹರಿಯುವ ಹೊಳೆ, ಪ್ರವಾಸದಿಂದಾಗುವ ಲಾಭಗಳು, ವಾಚನಾಲಯಗಳ ಅವಶ್ಯಕತೆ, ಸಾರ್ವಜನಿಕ ಉದ್ಯಾನಗಳು ಏಕೆ ಬೇಕು, ಮಡಿಯೇ ನಿರ್ಮಲ ಚಿತ್ತವೈ, ಜಾತಿ ವಿಜಾತಿಯೆನಬೇಡ, ಕೈಕೆಸರಾಗದೆ ಬಾಯಿ ಮೊಸರಾಗದು, ನಾಳೆ ಎಂದವನ ಮನೆ ಹಾಳು, ಇಬ್ಬರ ನ್ಯಾಯ ಮೂರನೆಯವನಿಗೆ ಆಯ.

೨. ಪರಿಚ್ಛೇದ ರಚನೆಯ ಬಗೆಗೆ ನೆನಪಿಡತಕ್ಕ ಮಾತುಗಳಾವುವು ?

---

# ೨. ಸಂಕ್ಷೇಪಲೇಖನ

## (ಅ) ಸಾಮಾನ್ಯ ವಿಷಯ ಸಂಕ್ಷೇಪ

**ವಿಷಯ:** ರಾಜ್ಯ ಸಾಮ್ರಾಜ್ಯಗಳು ಉದಯವಾಗಬಹುದು, ಅಸ್ತವಾಗಬಹುದು. ಆದರೆ ಅಲ್ಲಿಯ **ಸಂಸ್ಕೃತಿಯಾಗಲಿ ಜ್ಞಾನವಾಗಲಿ** ಕಣ್ಮರೆಯಾಗಲು ಕಾರಣವಿಲ್ಲ. ಅವು **ಪ್ರಗತಿಪಥದಲ್ಲಿ ಮುನ್ನಡೆಯುತ್ತಲೇ ಇರುತ್ತಿವೆ.** ಕಾಲ ಕಾಲಕ್ಕೆ ಸಾರಥಿಗಳು ಬದಲಾಗಿರಬಹುದು, ವೇಗವೂ ಹೆಚ್ಚುಕಡಿಮೆಯಾಗಿರಬಹುದು. ಆದರೂ ರಥ ಮಾತ್ರ ಮುರಿದು ಬಿದ್ದಿಲ್ಲ, ನಿಂತಲ್ಲಿಯೂ ನಿಂತಿಲ್ಲ. ಆದರೆ ಮಂದಗತಿಯ ಮುನ್ನಡೆಯಲ್ಲಿ ಹಿಂದಿನ ರಾಷ್ಟ್ರಕ್ಕೇ ಮೀಸಲಾದ ಸಂಸ್ಕೃತಿ-ಜ್ಞಾನಗಳು ಮುಂದಿನ ರಾಷ್ಟ್ರಕ್ಕೆ ಮುಟ್ಟುವುದರೊಳಗೆ ಕಾಣದಂತಾಗಬಹುದು. ಅಷ್ಟು ಮಾತ್ರಕ್ಕೇ ಅವು ಪೂರಾ ನಾಶಹೊಂದಿದುವೆಂದು ಹೇಳಲು ಬಾರದು. ಅನುಕೂಲ ಪರಿಸ್ಥಿತಿ ಬಂದರೆ ಲುಪ್ತವಾದ ಅಂಶಗಳು ಕೂಡ ಪುನರುಜ್ಜೀವನ ಹೊಂದುವುವು; ಜ್ಞಾನಗಂಗೆ ಮತ್ತೆ ಪ್ರಪೂರ್ಣ ಪ್ರವಾಹದಿಂದ ನಿರರ್ಗಳವಾಗಿ ಹರಿಯುವುದು. ಈ ವಿಶಾಲ ದೃಷ್ಟಿಯಿಂದ ನೋಡಿದರೆ, ಅಸ್ತಂಗತವಾದ ಯಾವ ರಾಷ್ಟ್ರ, ಸಂಸ್ಕೃತಿಜ್ಞಾನಗಳೂ

ವ್ಯರ್ಥವಾಗಿಲ್ಲ. ಅವು ಕ್ಷೀಣವಾದರೂ ಮುಂದುವರಿದ, ಮತ್ತೊಂದನ್ನು ಹೊಂದಿ **ಪ್ರಬಲವಾಗಿವೆ;** ಇಂದು ಅಂತಹವೆಲ್ಲವೂ ಒಟ್ಟಾಗಿ ನಮ್ಮಿದಿರಿಗೆ ಪ್ರಚಂಡ ಪರ್ವತರೂಪದಲ್ಲಿ ನಿಂತಿವೆ ಎಂಬ ಮಾತು ಮನದಟ್ಟಾಗುವುದು. **ಇಂದಿನ ಸಂಸ್ಕೃತಿ ಜ್ಞಾನಗಳ ಮಹಾ ಸಾಗರದಲ್ಲಿ ಮನಸಾರೆ ವಿಹರಿಸುವುದು ಯಾವ ವ್ಯಕ್ತಿತ್ವಕ್ಕೂ ಸಾಧ್ಯವಿಲ್ಲ.** ಒಂದೊಂದು ವಿಧದ ಜ್ಞಾನದಲ್ಲಿ ಒಬ್ಬೊಬ್ಬರು ಎತ್ತಿದ ಕೈ ಆಗಿರಬಹುದು; ಅಷ್ಟೇ. ಅವರಿಗೆ ಕೂಡ **ಹಿಂದಿನ ತತ್ವಜ್ಞರು ಎತ್ತಿ ತೋರಿಸಿದ** ತತ್ತ್ವಗಳೇ ಇವರ ವಿಚಾರಮಾರ್ಗದಲ್ಲಿಯ ಮೈಲುಗಲ್ಲುಗಳು, ಜ್ಞಾನದ ದೀವಟಿಗೆಗಳು. ಅವುಗಳ **ಜಾಡನ್ನು ಹಿಡಿದು** ನಡೆದರೇ ಗೊತ್ತು ಗುರಿಗಳನ್ನು ಕಾಣುವುದು; **ಮತಿವಂತಿಕೆಯಿದ್ದವರು ಹೊಸ ಹವಣಿಕೆಗಳನ್ನು ಹುಡುಕುವುದು.** ಇವೆಲ್ಲವೂ ಮುಂದೆ ಉದಯೋನ್ಮುಖವಾದ ಯಾವುದೇ ರಾಷ್ಟ್ರದವರಿಗೂ ಅನುಗೋಲುಗಳಾಗುವುವು. ಹೀಗೆ **ಸಂಸ್ಕೃತಿ ಜ್ಞಾನಗಳ ಗಂಗಾಪ್ರವಾಹ** ಎಂದಿನಿಂದಲೋ ಇಂದಿನ ವರೆಗೆ **ಹರಿಗಡಿಯದೆ ಸಾಗಿದೆ;** ಮುಂದೆಯೂ ಸಾಗಲಿದೆ.

## ೩ ಅಳತೆಯಲ್ಲಿ

ರಾಜ್ಯ ಸಾಮ್ರಾಜ್ಯಗಳು ಅಸ್ತವಾಗಬಹುದು; ಅಲ್ಲಿಯ ಸಂಸ್ಕೃತಿ ಜ್ಞಾನಗಳು ಮಾತ್ರ ಮತ್ತೊಂದು ರಾಷ್ಟ್ರದತ್ತ ಮುನ್ನಡೆಯುತ್ತಿವೆ. ಅಲ್ಲಿ ಹಿಂದಿನ ಮುಂದಿನ ಸಂಸ್ಕೃತಿ ಜ್ಞಾನಗಳು ಕೂಡಿ ಮತ್ತೆ ನಿರರ್ಗಳವಾಗಿ ಹರಿಯುತ್ತಿವೆ ಹೀಗೆಯೇ ಕಾಲಕಾಲಕ್ಕೆ ಅಂತಹವೆಲ್ಲ ಒಟ್ಟಾಗಿ ಇಂದು ನಮ್ಮ ಇದಿರಿಗೆ ಪ್ರಚಂಡ ರೂಪದಿಂದ ನಿಂತಿವೆ. ಇಂದಿನ ಮಾನ್ಯ ತತ್ತ್ವಜ್ಞರು ಆ ಹಿಂದಿನವರ ಜಾಡನ್ನೇ ಹಿಡಿದು ಹೊಸ ಹೊಸ ಶೋಧನೆಗಳನ್ನು ಮಾಡುತ್ತಿದ್ದಾರೆ. ಇವರ ಶೋಧಗಳು ಮುಂದಿನ ಯಾವುದೋ ರಾಷ್ಟ್ರಕ್ಕೆ ದಾರಿ ದೀವಟಿಗೆಗಳಾಗುವುವು. ಹೀಗೆಯೇ ಸಂಸ್ಕೃತಿ ಜ್ಞಾನಗಳ ಪ್ರವಾಹ ಹರಿಗಡಿಯದೆ ಸಾಗಿದೆ; ಮುಂದೆಯೂ ಸಾಗಲಿದೆ.

## ಸಾರಾಂಶಲೇಖನ

ರಾಜ್ಯ ಅಸ್ತವಾದರೂ ಅಲ್ಲಿಯ ಸಂಸ್ಕೃತಿ ಜ್ಞಾನಗಳು ಮತ್ತೊಂದು ರಾಷ್ಟ್ರಕ್ಕೆ ಮುನ್ನಡೆಯುತ್ತಿವೆ. ಅಲ್ಲಿ ಅವುಗಳೊಡನೆ ಕೂಡಿ ಮತ್ತೆ ತಡೆಯಿಲ್ಲದೆ ಹರಿಯುತ್ತಿವೆ. ಹೀಗೆಯೇ ಇಂದು ನಮ್ಮಿದಿರಿನ ಜ್ಞಾನ ಸಂಸ್ಕೃತಿಗಳ ಪ್ರಚಂಡ ಪರ್ವತವಾಗಿದೆ. ಈ ತತ್ತ್ವಗಳ ಬಲದಿಂದಲೇ ಇಂದಿನವರು ಹೊಸ ಶೋಧ ಮಾಡುತ್ತಿದ್ದಾರೆ. ಅವು ಮುಂದಿನವರಿಗೆ ಮಾರ್ಗದರ್ಶಿಯಾಗುತ್ತಿವೆ. ಹೀಗೆಯೇ ಜ್ಞಾನ – ಸಂಸ್ಕೃತಿಗಳ ಪ್ರವಾಹ ಹರಿಗಡಿಯದೆ ಸಾಗುತ್ತಿದೆ.

## ಮುಖ್ಯ ಮಾತುಗಳು

ಅಸ್ತವಾದ ರಾಷ್ಟ್ರದ ಸಂಸ್ಕೃತಿಗಳು ಮತ್ತೊಂದು ರಾಷ್ಟ್ರಕ್ಕೆ ಮುನ್ನಡೆಯುತ್ತಿವೆ— ಅಲ್ಲಿ ನಿರರ್ಗಳ ಪ್ರವಾಹವಾಗಿ ಮತ್ತೆ ಸಾಗುವುದು— ಹೀಗೆಯೇ ಇಂದಿನ ಸಂಸ್ಕೃತಿ ಜ್ಞಾನಗಳ

ಪ್ರಚಂಡ ಪರ್ವತವಾಗಿದೆ— ಹಳೆಯ ತತ್ತ್ವಗಳನ್ನು ಆಧರಿಸಿ ಈಗಿನವರು ಹೊಸ ಶೋಧ ಮಾಡುತ್ತಾರೆ— ಇವು ಮುಂದಿನವರಿಗೆ ಮಾರ್ಗದರ್ಶಕ.

## ತಲೆ ಬರಹ

### ಸಂಸ್ಕೃತಿ ಜ್ಞಾನಗಳ ಹರಿಗಡಿಯದ ಹೊನಲು

**ತಿಳಿವಳಿಕೆ:** ಸಂಕ್ಷೇಪಲೇಖನದ ಬಗೆಗೆ ಹಿಂದಿನ ಹೊತ್ತಗೆಗಳಲ್ಲಿ ಹೇಳಿದೆ. ಇಲ್ಲಿ ಇಷ್ಟೇ ಹೇಳುವೆವು:

(ಅ) ಕೊಟ್ಟ ಪರಿಚ್ಛೇದವನ್ನು ಸರಿಯಾಗಿ ಓದಿ ತಕ್ಕ ತಲೆಬರಹವನ್ನು ಗುರುತಿಸಿರಿ. (ಬ) ಆ ಮೇಲೆ ಪರಿಚ್ಛೇದದಲ್ಲಿಯ ಮುಖ್ಯ ಮಾತುಗಳನ್ನು ಕಂಡುಹಿಡಿಯಿರಿ. (ಕ) ಅವುಗಳಿಗೆ ಅತ್ಯಂತ ಪೋಷಕವಾಗುವ ಮಾತುಗಳನ್ನಷ್ಟೇ ಹೊಂದಿಸಿ ಬರೆದರೆ ಸಾರಾಂಶವಾಗುವುದು. (ಡ) ವಿಷಯದ ಮನವರಿಕೆಗೆ ತಕ್ಕಂತೆ ತುಸು ಬೆಳೆಸಿದರೆ ಒಂದು ಮೂರಾಂಶ ಅಳತೆಯ ಸಂಕ್ಷೇಪಲೇಖನವಾಗುವುದು. ಈ ಬರೆಹ ಸ್ಥೂಲಮಾನದಿಂದ— ಕೇವಲ ಶಬ್ದಗಳ ಎಣಿಕೆಯನ್ನೇ ಮಾಡದೆ— ಸಾಲುಗಳಿಗೆ ಒರೆ ಹತ್ತಿದರೂ ಸಾಕು.

## ಪ್ರಶ್ನೋತ್ತರ

ಕೆಳಗಿನ ಪ್ರಶ್ನಗಳಿಗೆ ಹಿಂದಿನ ಪರಿಚ್ಛೇದದಲ್ಲಿಯೇ ಉತ್ತರವನ್ನು ಹುಡುಕಿ ಹೇಳಿರಿ.

ಅ. ಯಾವುದೊಂದು ರಾಷ್ಟ್ರದ ಅಸ್ತದೊಡನೆ ಅಲ್ಲಿಯ ಸಂಸ್ಕೃತಿ ಜ್ಞಾನಗಳೂ ಅಸ್ತವಾಗುವುವೇ ?

ಆ. ಅವು ಪ್ರಗತಿಪಥದಲ್ಲಿರುವುದಾದರೆ ಎಲ್ಲಿಗೆ ಹೋಗುವುವು ?

ಇ. ಆ ಪ್ರಗತಿಯಲ್ಲಿ ಮೊದಲಿನ ವೇಗವಿರುವುದೇ ? ಏಕೆ ?

ಈ. ಮುಂದೆ ಅದು ನಿರರ್ಗಳವಾಗಿ ಹರಿಯುವುದೇ ?

ಉ. ಇಂದಿನ ಸಂಸ್ಕೃತಿ ಜ್ಞಾನಗಳ ಪ್ರಚಂಡ ಪರ್ವತ ಹೇಗಾಯಿತು ?

ಊ. ಹೊಸ ಶೋಧಗಳು ಹೇಗಾಗುವುವು ?

ಎ. ಸಂಸ್ಕೃತಿ ಜ್ಞಾನಗಳ ಹೊನಲು ಹರಿಗಡಿಯಲಾರದು— ಎಂಬುದನ್ನು ಚರ್ಚಿಸಿರಿ.

## (ಬ) ಬಾನುಲಿ ಭಾಷಣ

**ವಿಷಯ:** ಸ್ವತಂತ್ರ ಭಾರತ ಗಣರಾಜ್ಯದಲ್ಲಿ ವರ್ಗರಹಿತ ಸಮಾಜವನ್ನು ಕಟ್ಟಬೇಕು, ಜಾತೀಯತಾನಿರ್ಮೂಲನ ಮಾಡಬೇಕು ಎಂದು ರಾಷ್ಟ್ರದ ಮುಂದಾಳುಗಳೂ ಮಾತನಾಡುತ್ತಾರೆ, ಹಾಗೆಯೇ ಸರಕಾರವೂ ಸಾರುತ್ತಿದೆ. ಈ ಜಾತೀಯತೆಯಿಂದಾಗಿಯೇ ಅಂತರಂಗ ವಿದ್ರೋಹಗಳು ಹುಟ್ಟುತ್ತಲಿವೆ; ಪಕ್ಷಪಂಗಡಗಳು ತಲೆಯೆತ್ತುತ್ತಲಿವೆ. ಸ್ವಲ್ಪದರಲ್ಲಿ ಸತ್ಯದ ಸರ್ವನಾಶವಾಗುತ್ತಲಿದೆ. ಇದೆಲ್ಲ ಸರಿಯೇ. ಆದರೆ ಈ ಹೊಸ ಪ್ರಯತ್ನ-ಉಫ್ ಎಂದಕೂಡಲೆ ಗಾಳಿಗೆ ಹಾರಿಹೋಗುವಷ್ಟು— ಹಗುರಾಗಿದೆಯೇ ? ಮೇಲೆ ಮುಂದಾಳುಗಳೂ ಸರಕಾರವೂ ಎಷ್ಟೇ ಪ್ರಯತ್ನ ಮಾಡುತ್ತಿದ್ದರೂ ಜಾತೀಯಭೂತದ ತಾಂಡವ ಕಡಿಮೆಯಾಗಿಯೇ ಇಲ್ಲವಲ್ಲ ! ಇದಕ್ಕೆ ಕಾರಣವೇನು ? ಜಾತಿ ಎಂಬ ಶಬ್ದ ಎಂದು ಮತ್ತು ಹೇಗೆ ಹುಟ್ಟಿತೆಂಬುದನ್ನು ತುಸು ನೋಡೋಣ.

ಮಹಾತ್ಮಾ ಗಾಂಧಿಯವರು ತಮ್ಮ ಅನಾಸಕ್ತಿಯೋಗಗ್ರಂಥದಲ್ಲಿ— ಮಾನವ ಜನಾಂಗದ ಜನ್ಮದೊಡನೆಯೆ ಜಾತಿಯೂ ಹುಟ್ಟಿತು— ಎಂದು ಹೇಳುತ್ತಾರೆ. ಇದೇ ಜಾತಿಯು ಬಗೆಗೆ ಶ್ರೀ ಬಸವೇಶ್ವರರು— ಕಾಸಿ ಕಮ್ಮಾರನಾದ, ಬೀಸಿ ಮಡಿವಳನಾದ, ಹಾಸನಿಕ್ಕಿ ಸಾಲಿಗನಾದ. ಕುಲವೇನೋ, ಅವಂದಿರ ಕುಲವೇನೋ— ಎಂದು ಜಾತೀಯತಾವಾದಿಗಳನ್ನು ಆಹ್ವಾನಿಸುತ್ತಾರೆ. ಈ ಮಹಾತ್ಮರಿಬ್ಬರ ಮಾತುಗಳು ಒಂದಕ್ಕೊಂದು ತಾರಕವಾಗಿವೆಯೇ, ಮಾರಕವಾಗಿವೆಯೇ ?

ಜಾತಿಯೆಂದಾಗ, ಕೀಳು ಮೇಲುಗಳ ಕಲಹಕ್ಕೆ ಕಾರಣವಾದ 'ಕುಲ' ಎಂದಿಟ್ಟುಕೊಂಡರೆ, ಈ ಎರಡೂ ಮಾತುಗಳೂ ಪರಸ್ಪರ ಮಾರಕವೇ ಆಗುವುವು. ಜಾತೀಯತೆಯನ್ನು ನಿರ್ಮೂಲನ ಮಾಡುವುದು ಸಾಧ್ಯವೇ ಇಲ್ಲವೆಂದು ಮಹಾತ್ಮರ ಮಾತಿನ ನಿರ್ಣಯ ಬರುವುದು. ಹಾಗಲ್ಲದೆ, ಜಾತೀಯತೆಯೆಂದರೆ ಹಿರಿಯರಿಂದ ಕಿರಿಯರಿಗೆ ಬಂದ ಕಾರ್ಯ ಕೌಶಲ ಎಂಬ ಅರ್ಥವನ್ನು ಇಟ್ಟುಕೊಂಡರೆ ಎರಡೂ ಮಾತುಗಳು ತಾರಕವಾಗಿ– ಪೂರಕವಾಗಿ- ತೋರುವುವು. ಇವೆರಡರಲ್ಲಿ ಈಗ ಜಾತೀಯತಾನಿರ್ಮೂಲನವೆಂದರೆ ಯಾವ ಅರ್ಥವನ್ನು ಇಟ್ಟುಕೊಳ್ಳಬೇಕು ?

ಜಾತೀಯತಾ ನಿರ್ಮೂಲನವೆಂದರೆ, ಕೀಳು–ಮೇಲುಗಳ ಕಲಹಕ್ಕೆ ಕಾರಣವಾಗಿರುವ ಕುಲವೆಂಬ ಅರ್ಥವನ್ನೇ ಇಟ್ಟುಕೊಳ್ಳುವುದು ಪ್ರಸ್ತುತವಾಗಿದೆ. ಈ ಕುಲದ ಕಲಂಕವನ್ನು ತೊಡೆಯುವುದು ಸುಲಭಸಾಧ್ಯವೇ ? ರಾಮಾಯಣ ಮಹಾಭಾರತದಲ್ಲಿ ಕೂಡ ಜಾತೀಯತೆಯ ದುರಂತ ಚಿತ್ರಗಳಿವೆ. ಈಗಂತೂ ಅದರ ಅಕಾಂಡ ತಾಂಡವನ್ನು ಬಣ್ಣಿಸುವಂತೆಯೇ ಇಲ್ಲ. ಆ ಭೂತದ ಉಚ್ಚಾಟನವಾಗದೆ ಭಾರತಕ್ಕೆ ಸಿಕ್ಕ ಸ್ವಾತಂತ್ರ್ಯ ದಕ್ಕುವಂತಿಲ್ಲ. ಆದರೆ ಇದಕ್ಕೆ ಉಪಾಯವೇನು ?

ಶಾಸನಗಳ ಬೆಂಬಲದಿಂದ ವರ್ಗರಹಿತ ಸಮಾಜವನ್ನು ಕಟ್ಟಬಹುದೆಂದು ತಟ್ಟನೆ ಹೇಳಿ ಬಿಡಬಹುದಾಗಿದೆ. ಆದರೆ, ಇದು ಸ್ಥಿರವಾಗಿ ನಿಂತೀತೇ ? ಈ ಬಗೆಗೆ ದಿ. ಸರದಾರ ವಲ್ಲಭಭಾಯಿಯವರು ಹೇಳಿದ ಮಾತು ನಿತಾಂತ ಸತ್ಯವಾಗಿದೆ. "ಈ ವಿಷಯವನ್ನು ಮುಂದುವರಿದ ಸಮಾಜದವರು ಮುಂದೆ ತರುವುದಾಗಲಿ ಶಾಸನಗಳಿಂದ ನಿಯಂತ್ರಿಸುವುದಾಗಲಿ ಹಿತಕರವಲ್ಲ. ಹಿಂದುಳಿದ ವರ್ಗದವರಿಂದ, ಕನಿಷ್ಠ ಪಕ್ಷಕ್ಕೆ ಮಧ್ಯಮ ವರ್ಗದವರಿಂದಾದರೂ, ಈ ಪ್ರಶ್ನೆ ಮುಂದೆ ಬರಬೇಕು. ಹಾಗಾಗಬೇಕಾದರೆ, ಎಲ್ಲ ಜಾತೀಯ ಉದ್ಯೋಗಗಳಿಗೂ ಸರಕಾರದಿಂದ ತಕ್ಕ ಪ್ರೋತ್ಸಾಹ ದೊರೆಯಬೇಕು; ಮತ್ತು ಅವರೆಲ್ಲರೂ ಶಿಕ್ಷಣ ಕ್ಷೇತ್ರದಲ್ಲಿ ಸಾಕಷ್ಟು ಮುಂದುವರಿಯುವಂತೆ ಅವರಿಗೆ ಶಿಕ್ಷಣ ಸೌಲಭ್ಯಗಳನ್ನು ಕಲ್ಪಿಸಬೇಕು." ಇದು ಅವರ ಮಾತಿನ ಸಾರವಾಗಿದೆ. ನಿಜವಾಗಿಯೂ ಆಡಳಿತಕ್ಕೆ ಒಪ್ಪತಕ್ಕಂತಹ ಮಾತು.

ಮಧ್ಯಮ ವರ್ಗದವರಿಗೂ ಹಿಂದುಳಿದವರಿಗೂ ಈ ಬಗೆಯಾಗಿ ಸರಕಾರದಿಂದಲೂ ಮುಂದುವರಿದ ಸಮಾಜದಿಂದಲೂ ಶೈಕ್ಷಣಿಕ, ಔದ್ಯೋಗಿಕ, ಪ್ರೋತ್ಸಾಹನ ದೊರೆತುದಾದರೆ ಜಾತೀಯತೆಯ ಜಂಭ ತಾನಾಗಿಯೇ ಹೇಳಹೆಸರಿಲ್ಲದೆ ಹೋಗುವುದು.

ಸರಕಾರಕ್ಕೂ ಈ ಮಾತು ಮನವರಿಕೆಯಾದಂತಿದೆ. ಎಂತೆಯೇ ರೈತ, ಕೂಲಿಕಾರರ ಉದ್ಧಾರಕ್ಕಾಗಿ ಹಲವಾರು ಯೋಜನೆಗಳನ್ನು ಮಾಡುತ್ತಲಿದೆ; ಶಿಕ್ಷಣ ಕ್ಷೇತ್ರದಲ್ಲಿಯೂ ಬಗೆಬಗೆಯ ಸುಧಾರಣೆಗಳನ್ನು ಯೋಚಿಸುತ್ತಲಿದೆ. ಆದರೆ, ಸರಕಾರದ ಸುಧಾರಣಾ ಯೋಜನೆಗಳು ಬಳಕೆಯಲ್ಲಿ ಬರಲು ಅದೇಕೋ ಅಡ್ಡಿ–ಆತಂಕಗಳು ಒದಗುತ್ತಲಿವೆ; ಮನಸ್ಸಿನಲ್ಲಿದ್ದರೂ ಮಾತು ಕೃತಿಯಲ್ಲಿ ಬಾರದಂತಾಗಿದೆ. ಆದರೂ ಅದು ಪ್ರಯತ್ನಗಳನ್ನು ಬಿಟ್ಟುಕೊಟ್ಟಿಲ್ಲ. ಈ ಪ್ರಸಂಗದಲ್ಲಿ ಮಾಧ್ಯಮಿಕರೂ ಹಿಂದುಳಿದವರೂ ಸಿಕ್ಕಷ್ಟು ಸಹಾಯ್ಯದಿಂದಲೇ ತೃಪ್ತರಾಗಬೇಕು, ಸಾಧ್ಯವಿದ್ದಮಟ್ಟಿಗೂ ಜಾತೀಯತೆಯನ್ನು ನಿರ್ಮೂಲನ ಮಾಡಲು ಸರಕಾರದೊಡನೆ ಸಹಕರಿಸಬೇಕು, ಎಂದು ನಮ್ಮ ಬಿನ್ನಹ.

**ಜಯ ಹಿಂದ**

**ತಲೆ ಬರೆಹ:** ಜಾತೀಯತಾ ನಿರ್ಮೂಲನ.

**ಮುಖ್ಯ ಮಾತುಗಳು:** ಜಾತೀಯತಾ ನಿರ್ಮೂಲನ ವಿಚಾರವೇಕೆ ? ಜಾತೀಯತೆಯ ಬಗೆಗೆ ಮಹಾತ್ಮರ ಅಭಿಪ್ರಾಯ— ಈ ಬಗೆಗೆ ಶ್ರೀ ಬಸವೇಶ್ವರರ ಆಹ್ವಾನ— ಇವು ಪರಸ್ಪರ ಪೂರಕವೇ, ಮಾರಕವೇ— ಈಗ ಜಾತೀಯತೆ ಯಾವ ಅರ್ಥದಲ್ಲಿದೆ— ಅದರ ನಿರ್ಮೂಲನ ಮಾಡುವ ಬಗೆಗೆ ದಿ. ಸರದಾರ ವಲ್ಲಭಭಾಯಿಯವರ ಸೂಚನೆಯೇನು ?— ಈ ಸೂಚನೆಯನ್ನು ನೆರವೇರಿಸುವುದಕ್ಕೆ ಸರಕಾರ ಹೇಗೆ ಪ್ರಯತ್ನಿಸುತ್ತಲಿದೆ— ಅದು ಯಶಸ್ವಿಯಾಗಿದೆಯೇ— ಮಧ್ಯಮ ವರ್ಗದವರೂ ಹಿಂದುಳಿದವರೂ ಮಾಡಬೇಕಾದುದೇನು ?

**ಸಾರಾಂಶ:** ಸ್ವತಂತ್ರ ಭಾರತದಲ್ಲಿ ವರ್ಗರಹಿತ ಸಮಾಜವನ್ನು ಕಟ್ಟಬೇಕೆಂದು ಮುಂದಾಳುಗಳೂ ಸರಕಾರವೂ ಹೇಳುತ್ತಲಿವೆ. ಏಕೆಂದರೆ ಈ ಜಾತೀಯತೆಯಿಂದ ಸತ್ತ್ವದ ಸರ್ವನಾಶವಾಗುತ್ತಿದೆ. ಆದರೆ ಈ ನಿರ್ಮೂಲನ ಕಾರ್ಯ ಸುಲಭಸಾಧ್ಯವಾಗಿಲ್ಲ. ಮನುಷ್ಯ ಹುಟ್ಟಿದಾಗಲೇ ಜಾತಿಗಳು ಹುಟ್ಟಿದುವೆಂದು ಮ. ಗಾಂಧಿಯವರು ಹೇಳುತ್ತಾರೆ. 'ಕಾಸಿ ಕಮ್ಮರನಾದ ........ಕುಲವೇನೋ ಅವಂದಿರ ಕುಲವೇನೋ' ಎಂದು ಬಸವಣ್ಣನವರು ಕೇಳುತ್ತಾರೆ. ಇವರಿಬ್ಬರ ಅಭಿಪ್ರಾಯದಲ್ಲಿ, ಜಾತಿಯೆಂದರೆ ಆನುವಂಶಿಕ ಕಾರ್ಯಕೌಶಲ ಎಂದು ಅರ್ಥವಾಗುತ್ತಿದೆ.

ಆದರೆ, ಈಗ ಜಾತೀಯತೆಯೆಂದರೆ ಕೀಳುಮೇಲುಗಳ ಕಲಹಕ್ಕೆ ಕಾರಣವಾದ ಕುಲ ಎಂಬರ್ಥವಿದೆ. ಈ ಅನಿಷ್ಟವನ್ನು ಕಾಯದೆಯಿಂದ ಕಿತ್ತೊಗೆಯುವುದು ಸಾಧ್ಯವಿಲ್ಲ. ಮಧ್ಯಮ ವರ್ಗದವರಿಗೂ ಹಿಂದುಳಿದವರಿಗೂ ಶಿಕ್ಷಣ–ಉದ್ಯೋಗಗಳ ಸೌಕರ್ಯವನ್ನು ಕಲ್ಪಿಸಿ

ಕೊಟ್ಟರೆ ಈ ಪ್ರಯತ್ನ ಯಶಸ್ವಿಯಾಗುವುದೆಂದು ದಿ. ವಲ್ಲಭಭಾಯಿಯವರು ಹೇಳಿದ್ದಾರೆ. ಇದೇ ದಿಶೆಯಲ್ಲಿ ಸರಕಾರ ಮಾಧ್ಯಮಿಕ ಮತ್ತು ಹಿಂದುಳಿದವರ ಏಳ್ಗೆಗಾಗಿ ಯೋಜನೆ ಮಾಡುತ್ತಲಿದೆ. ಅವು ಸರಾಗವಾಗಿ ಬಳಕೆಯಲ್ಲಿ ಬರುವವರೆಗೆ ಈ ಜನರಾದರೂ ತಾಳ್ಮೆ ಯಿಂದಿರಬೇಕು, ಸರಕಾರದೊಡನೆ ಸಹಕರಿಸಬೇಕು ಎಂದು ಹೇಳುತ್ತೇವೆ.

## ೩ ಅಳತೆಯಲ್ಲಿ

ಭಾರತದ ಗಣರಾಜ್ಯದಲ್ಲಿ ವರ್ಗರಹಿತ ಸಮಾಜವನ್ನು ಕಟ್ಟಬೇಕೆಂದು ರಾಷ್ಟ್ರನಾಯ ಕರೂ ಸರಕಾರವೂ ಹೇಳುತ್ತಿವೆ. ಈ ಜಾತೀಯತೆಯಿಂದಾಗಿಯೇ ಅಂತರಂಗ ದ್ರೋಹ ಬೆಳೆಯುತ್ತಿದೆ, ಸತ್ಯ ಸಾಯುತ್ತಿದೆ. ಹೀಗಿದ್ದರೂ ಜಾತೀಯತೆಯನ್ನು ನಿರ್ಮೂಲನ ಮಾಡು ವುದು ಸುಲಭಸಾಧ್ಯವೇ ?

ಮನುಷ್ಯನು ಹುಟ್ಟಿದಾಗಲೇ ಜಾತಿ ಹುಟ್ಟಿದುವೆಂದು ಮಹಾತ್ಮರು ಹೇಳಿದ್ದಾರೆ. 'ಕಾಸಿ ಕಮ್ಮರನಾದ ........ಅವಂದಿರ ಕುಲವೇನೊ' ಎಂದು ಬಸವೇಶ್ವರರು ಆಹ್ವಾನಿಸಿ ದ್ದಾರೆ. ಜಾತಿಯೆಂದರೆ, ಆನುವಂಶಿಕವಾಗಿ ಬಂದ ಕಾರ್ಯಕೌಶಲ ಎಂಬರ್ಥದಲ್ಲಿ ಜಾತೀ ಯತೆ ಯುಕ್ತವೇ ಆಗಿದೆ. ಆದರೆ, ಕೀಳುಮೇಲುಗಳ ಕಲಹಕ್ಕೆ ಕಾರಣವಾದ ಕುಲ ಎಂಬರ್ಥದಲ್ಲಿ ಜಾತೀಯತೆ ಹಾನಿಕಾರಕವೇ ಸರಿ. ಈಗ ಇದೇ ಅರ್ಥವೇ ಬಳಕೆಯಲ್ಲಿದೆ.

ಈ ಅನಿಷ್ಟವನ್ನು ಶಾಸನಗಳ ಬೆಂಬಲದಿಂದ ಕಿತ್ತೊಗೆಯಬೇಕೆಂದು ಕೆಲವರ ಮತ. ಆದರೆ ಹಿಂದುಳಿದವರಿಗೂ ಮಾಧ್ಯಮಿಕರಿಗೂ ಶಿಕ್ಷಣ ಮತ್ತು ಉದ್ಯೋಗ ಸೌಕರ್ಯಗಳನ್ನು ಒದಗಿಸಿಕೊಡಬೇಕು; ಅದರ ಫಲವಾಗಿ ಅವರು ಮುಂದುವರಿಯುವಂತೆ ಯತ್ನಿಸಬೇಕು. ಆಮೇಲೆ ಅವರಿಂದಲೇ ಈ ಜಾತೀಯತಾ ನಿರ್ಮೂಲನ ಪ್ರಶ್ನೆ ಮುಂದೆ ಬರುವಂತೆ ಮಾಡ ಬೇಕು, ಎಂದು ದಿ. ವಲ್ಲಭಭಾಯಿ ಹೇಳುತ್ತಿದ್ದರು. ನಿಜಕ್ಕೂ ಒಪ್ಪತಕ್ಕ ಮಾತು.

ಈ ದಿಸೆಯಲ್ಲಿಯೇ ಸರಕಾರದ ಪ್ರಯತ್ನ ನಡೆದಿದೆ. ಹಿಂದುಳಿದವರ ಮತ್ತು ಮಾಧ್ಯ ಮಿಕರ ಹಾಗೆಯೇ ರೈತ-ಕೂಲಿಕಾರರ ಏಳ್ಗೆಗಾಗಿ ಹಲವಾರು ಯೋಜನೆಗಳನ್ನು ಮಾಡಿದೆ. ಮಾತ್ರ ಆಗತಕ್ಕಷ್ಟು ಕೆಲಸವಾಗಿಲ್ಲ. ಈ ಪ್ರಸಂಗದಲ್ಲಿ, ಹಿಂದುಳಿದವರೂ ಮಾಧ್ಯಮಿಕರೂ ತಾಳ್ಮೆಯಿಂದ ಸರಕಾರದೊಡನೆ ಸಹಕರಿಸಿದರೆ ಜಾತೀಯತೆಯ ನಿರ್ಮೂಲನವಾಗುವುದು.

ಕೆಳಗಿನ ಪ್ರಶ್ನಗಳಿಗೆ ಉತ್ತರ ಕೊಡಿರಿ.

(ಅ) ಈಗ ಜಾತೀಯತೆಯ ಬಗೆಗೆ ಭಾರತೀಯ ಮುಂದಾಳುಗಳ ಮತ್ತು ಸರಕಾರದ ಅಭಿಪ್ರಾಯವೇನಿದೆ? ಏಕೆ? (ಆ) ಜಾತೀಯತೆಯ ಬಗೆಗೆ ಮಹಾತ್ಮಾ ಗಾಂಧಿಯವರೂ ಶ್ರೀ ಬಸವೇಶ್ವರರೂ ಏನೇನು ಹೇಳುತ್ತಾರೆ? ಅದು ತಪ್ಪೋ ಒಪ್ಪೋ? (ಇ) ಈ ಜಾತೀಯತೆ ಯಾವ ಅರ್ಥದಲ್ಲಿದೆ? (ಈ) ಇದಕ್ಕೆ ದಿ. ವಲ್ಲಭಭಾಯಿಯವರು ಯಾವ ಸೂಚನೆ ಮಾಡುತ್ತಾರೆ? ಈ ಬಗೆಗೆ ನಿಮ್ಮ ಅಭಿಪ್ರಾಯವೇನಿದೆ? (ಉ) ಈ ಪ್ರಸಂಗ ದಲ್ಲಿ ಹಿಂದುಳಿದವರ ಮಾಧ್ಯಮಿಕರ ಕರ್ತವ್ಯವೇನು?

## — ಬಳಕೆ ಮತ್ತು ಕೇಳಿಕೆ —

೧. ಕೆಳಗಿನ ವಿಷಯಕ್ಕೆ (ಅ) ತಕ್ಕ ತಲೆಬರೆಹವನ್ನು ಕೊಡಿರಿ. (ಆ) ಮುಖ್ಯ ಮಾತುಗಳನ್ನು ತೆಗೆಯಿರಿ. (ಇ) ಸಾರಾಂಶವನ್ನು ಬರೆಯಿರಿ. (ಈ) ಒಂದು ಮೂರಾಂಶ ಅಳತೆಯನ್ನು ಹೊಂದಿಸಿರಿ.

ಮಹಾಶಯರೇ ಪೂರ್ವ ಕಾವ್ಯರಾಶಿ ಪ್ರಕಾಶಕ್ಕೆ ಬಂದು, ನಮ್ಮ ಹಿರಿಯರು ಕೂಡಿಸಿಟ್ಟಿದ್ದ ನಿಕ್ಷೇಪ ನಮ್ಮ ಹಸ್ತಗತವಾಗಿ, ಸರ್ವರಿಗೂ ಸಮಾನವಾದ ಸಾಹಿತ್ಯವಾಗಿ, ಜೈನಕಾವ್ಯವೇ ಆಗಲಿ, ವೀರಶೈವ ಕಾವ್ಯವೇ ಆಗಲಿ, ಬ್ರಾಹ್ಮಣ ಕಾವ್ಯವೇ ಆಗಲಿ, ಆಗಲೇ ಸಿದ್ಧವಾಗಿರುವ ಕನ್ನಡ ಬೈಬಲ್ ಜೊತೆಗೆ ಒಂದು ಕ್ರೈಸ್ತ ಕಾವ್ಯಮಾಲೆಯೂ ಮತ್ತು ಮಹಮ್ಮದೀಯ ಕಾವ್ಯಮಾಲೆಯೂ ಶ್ರೀಘ್ರದಲ್ಲಿಯೇ ನಮ್ಮ ಇತರ ಸಾಹಿತ್ಯವಾಹಿನಿಗಳೊಡನೆ ತಾವೂ ಬಂದು ಕೂಡುವುವೆಂದು ನಾನು ಹಾರೈಸುತ್ತೇನೆ. ಯಾವ ಸಾಹಿತ್ಯದ ಶಾಖೆಯೇ ಆಗಲಿ, ಎಲ್ಲವೂ ನಮ್ಮ ಕನ್ನಡವೆಂದೂ ಅದುದರಿಂದ ನಮ್ಮದೆಂದೂ ಆದರಿಸುವ ಕಾಲ ಇದು. ಎಲ್ಲ ಸಂಸ್ಕೃತಿಗಳಲ್ಲಿಯೂ ಎಲ್ಲ ಧರ್ಮಗಳಲ್ಲಿಯೂ ಎಲ್ಲ ಕವಿತಾ ಮಾರ್ಗಗಳಲ್ಲಿಯೂ ವಿಮರ್ಶನ ಪೂರ್ವಕವಾದ ವಿಶ್ವಾಸವಿಟ್ಟು ಎಲ್ಲ ಕಡೆಗಳಿಂದಲೂ ಉತ್ತಮ ಪಕ್ಷವನ್ನು ಸ್ವೀಕಾರ ಮಾಡುವ ವಿಶಾಲ ಹೃದಯದ ಕಾಲ ಇದು. ಸಾರ್ವಜನಿಕವಾದ ಉದ್ಯಮಗಳಿಗೂ ಪ್ರಾಧಾನ್ಯವನ್ನು ಕೊಟ್ಟು, ಮಾನುಷಿಕವಾದದ್ದು ಯಾವುದೂ ನನಗೆ ಹೊರಗಲ್ಲ, ಎಂಬ ಆಶೋಕ್ತಿಗಳ ತತ್ವವನ್ನನುಸರಿಸಿ ಜಗತ್ತಿನಲ್ಲೆಲ್ಲ ಮೈತ್ರಿಯೂ ಶಾಂತಿಯೂ ಸಮಾನ ಧರ್ಮವೂ ಶ್ರೇಯಸ್ಸೂ ವರ್ಧಿಸಲಿ ಎಂದು ದೀಕ್ಷೆಗೊಳ್ಳುವ ಕಾಲ ಇದು. ಮಲಗಿದ್ದ ಜನರು ಎಚ್ಚತ್ತಿದ್ದಾರೆ. ಹಳೆಯ ಆತ್ಮದಿಂದ ಹೊಸ ಆತ್ಮವನ್ನು ಸೃಷ್ಟಿಮಾಡುತ್ತಿದ್ದಾರೆ. ಸತ್ಯ, ಸೌಂದರ್ಯ, ಸ್ವಾತಂತ್ರ್ಯ, ಸ್ವಾರ್ಥತ್ಯಾಗ, ಸೇವೆ ಇವೇ ನಮ್ಮ ಜೀವಮಾನದ ದೀಪಿಕೆಗಳೆಂದು ಸಾರುತ್ತಿದ್ದಾರೆ. ಇಂತಹ ಸ್ವರ್ಣಯುಗದಲ್ಲಿ ನಾನು ಸಾಹಿತ್ಯ ಪ್ರೇಮಿಗಳಿಗೆ, ಕರ್ನಾಟಕ ವೀರ ಪುತ್ರರಿರಾ, 'ಓಂ ತತ್ಸವಿತುರ್ವರೇಣ್ಯಂ—' ಎಂಬ ದಿವ್ಯ ಮಂತ್ರವನ್ನು ಪ್ರಾರ್ಥಿಸಲು ಕೇಳಿಕೊಳ್ಳಬಹುದಲ್ಲವೇ ?

೨. ಸಂಕ್ಷೇಪ ಲೇಖನದ ಬಗೆಗೆ ತಿಳಿದುಕೊಳ್ಳತಕ್ಕ ಮಾತುಗಳಾವುವು ?

# ೩. ಕತೆಗಳನ್ನು ಕಟ್ಟುವುದು

## (ಅ) ಕೊಟ್ಟ ವಿಚಾರಕ್ಕೆ ತಕ್ಕ ಕತೆಯನ್ನು ಕಟ್ಟುವುದು.

"ಪ್ರಸಂಗಾವಧಾನವೇ ಪ್ರಾಣಾಪಾಯದಿಂದ ಪಾರುಮಾಡಿತು." ಈ ಅಭಿಪ್ರಾಯವನ್ನು ಅಧಿಕರಿಸಿ ಕತೆಯನ್ನು ಕಟ್ಟಿರಿ. ಅದರ ನಡುವೆಯಾಗಲಿ ಕೊನೆಯಲ್ಲಾಗಲಿ ಈ ವಾಕ್ಯ ಬರುವಂತಿರಲಿ.

### ೧. ಪ್ರಸಂಗಾವಧಾನ

ರಣಜಿತಸಿಂಗ ಶೀಖರಲ್ಲಿ ಒಳ್ಳೆ ಹೆಸರಾದ ದೊರೆ. ಆತನು ಶೂರನಿದ್ದಂತೆ ಬುದ್ಧಿವಂತನೂ ಆಗಿದ್ದ. ಮಾತಿನಲ್ಲಿ ಬಲು ಚಪಲ. ಹೆರವರ ಅಂತರಂಗವನ್ನು ತಡವಿಲ್ಲದೆ ಕಂಡುಕೊಳ್ಳುತ್ತಿದ್ದ. ಅದಕ್ಕೆ ತಕ್ಕ ಉಪಾಯಗಳನ್ನು ಯೋಜಿಸುತ್ತಿದ್ದ. ಆತನ ಹೃದಯ ಹೂವಿನಂತೆ ಮಿದುವಾಗಿದ್ದರೂ ಆ ಕುರೂಪಿ ಮೋರೆಯ ಮೇಲೆ ಕ್ರೂರ ಕಳೆ ಒಡೆದು

ಕಾಣುತ್ತಿತ್ತು. ಆದರಿಂದ ಜನರು ಆತನ ಇದಿರಿಗೆ ನಿಲ್ಲಲು ತರತರ ನಡುಗುತ್ತಿದ್ದರು. ಅರಸನ ಎಡಗಣ್ಣು ಕುರುಡು. ಆದರೆ ಅದನ್ನು ಆಡಿಕೊಳ್ಳುವ ಧೈರ್‍ಯ ಯಾರಿಗೂ ಇರಲಿಲ್ಲ. ಹೀಗಿದ್ದಿತು ಅವನ ದರ್ಪ.

ಒಮ್ಮೆ ಒಬ್ಬ ಚಿತ್ರಕಾರ ಅರಸನ ಆಸ್ಥಾನಕ್ಕೆ ಬಂದ, ತಾನು ತೆಗೆದ ಒಳ್ಳೊಳ್ಳೆಯ ಚಿತ್ರಗಳನ್ನು ಆತನಿಗೆ ತೋರಿಸಿದ. ಬಹುಶಃ ಅವೆಲ್ಲ ಬೇರೆ ಬೇರೆ ಅರಸರವೇ ಇದ್ದುವು. ಅವುಗಳ ಬಗೆಗೆ ಆ ದೊರೆಗಳು ಕೊಟ್ಟ ಸಂಭಾವನೆಯನ್ನು ಚಿತ್ರಕಾರ ಹೊಗಳಿಕೊಂಡ. ಮತ್ತು, 'ಪ್ರಭುಗಳು ತಮ್ಮದೊಂದು ಭಾವಪಟವನ್ನು ಬರೆಸಬೇಕು' ಎಂದು ಬಿನ್ನಹ ಮಾಡಿಕೊಂಡ.

ರಣಜಿತಸಿಂಗ ಒಪ್ಪಿಗೆಯನ್ನು ಕೊಟ್ಟ. ಇನ್ನು ಎರಡು ಮೂರು ದಿವಸಗಳಲ್ಲಿ ಅದು ಸಿದ್ಧವಾಗಬೇಕೆಂದು ಅಪ್ಪಣೆ ಮಾಡಿದ.

ಚಿತ್ರಕಾರ ಒಳ್ಳೆ ಹಿಗ್ಗಿನಿಂದ ಅರಸನ ಮುಖವನ್ನು ನೋಡಿದ. ಎಡಗಣ್ಣಿನಲ್ಲಿ ಕುರುಡು! ಅಯ್ಯೋ! ಆ ಬಡಪಾಯಿಯ ಎದೆ ಧಸ್ ಎಂದಿತು. ಆ ಕುರುಡು ಕಣ್ಣನ್ನು ಚಿತ್ರಿಸುವುದು ಹೇಗೆ. ಚಿತ್ರಸಿದರೂ ಚಿತ್ರಿಸದಿದ್ದರೂ ತನಗೆ ಪ್ರಾಣಾಪಾಯ ತಪ್ಪಿದುದಲ್ಲ ವೆಂದು ತಿಳಿದುಕೊಂಡ. ಕೊಲ್ಗಂಬದ ಕಡೆಗೆ ಕಾಲು ಹಾಕುವ ಅಪರಾಧಿಯಂತೆ ಮೆತ್ತಗೆ ಮನೆಗೆ ಹೊರಟ.

ಅಂದು ಅವನಿಗೆ ಊಟ ಬೇಕಿಲ್ಲ, ನಿದ್ದೆ ಬೇಕಿಲ್ಲ. ಹಾಗೇ ಚಿಂತಿಸುತ್ತ ಹಾಸುಗೆಯ ಮೇಲೆ ಹೊರಳಾಡುತ್ತಿದ್ದ, ನಿಟ್ಟುಸಿರು ಬಿಡುತ್ತಿದ್ದ, ಆ ಹೊತ್ತಿಗೆ ಸರಿಯಾಗಿ ಆತನ ಮಗಳು ಅಲ್ಲಿಗೆ ಬಂದಳು, ತಂದೆಯ ಚಿಂತೆಯ ಕಾರಣವನ್ನು ಕೇಳಿದಳು.

ಚಿತ್ರಕಾರ ನಡೆದುದೆಲ್ಲವನ್ನೂ ಮಗಳಿಗೆ ಹೇಳಿದ. ಆಕೆಯೂ ಚಿತ್ರಕಾರನ ಮಗಳು, ಕುಶಲ ಕಲಾವಿದೆ. ತಂದೆಯ ಪ್ರಾಣಾಪಾಯವನ್ನು ತಪ್ಪಿಸುವುದಕ್ಕೆ ಹಂಚಿಕೆಯೊಂದು ಹೊಳೆಯಿತು ಆಕೆಗೆ. ಕೂಡಲೆ ಹೇಳಿದಳು;— ಅಪ್ಪಾ ಇದಕ್ಕೇಕೆ 'ಇಷ್ಟು ಚಿಂತೆ? ದೊರೆ ಸಿಂಹದ ಬೇಟೆಯನ್ನಾಡಲು ಬಾಣದ ಗುರಿಯಿಟ್ಟಂತೆ ಚಿತ್ರವನ್ನು ತೆಗೆಯಿರಿ.

ಚಿತ್ರಕಾರನಿಗೆ ಮಗಳ ಈ ಪ್ರಸಂಗಾವಧಾನದಿಂದ ಹಿಡಿಸಲಾರದ ಹಿಗ್ಗಾಯಿತು. ತಟ್ಟನೆ ತನ್ನ ಸಲಕರಣೆಗಳನ್ನು ತೆಗೆದುಕೊಂಡ. ಅನತಿ ದೂರದಲ್ಲಿ ಕೆರಳಿ ನಿಂತಿದ್ದ ಸಿಂಹ; ಇದಿರಿಗೆ ರಣಜಿತಸಿಂಗ ಬಿಲ್ಲಿಗೆ ಬಾಣವನ್ನು ಹೂಡಿದ್ದಾನೆ; ಎಡಗಣ್ಣನ್ನು ಮುಚ್ಚಿ ಬಲಗಣ್ಣಿನಿಂದ ಗುರಿಯಿಡುತ್ತಿದ್ದಾನೆ: ಈ ಸನ್ನಿವೇಶದಲ್ಲಿ ಚಿತ್ರವನ್ನು ಸಿದ್ಧಪಡಿಸಿದ.

ಮರುದಿನವೇ ಚಿತ್ರಗಾರ ದೊರೆಗೆ ಚಿತ್ರಪಟವನ್ನು ಒಪ್ಪಿಸಿದ. ಅರಸು ಆ ಕಲಾವಿದನ ಚಿತ್ರ ನೈಪುಣ್ಯವನ್ನು ಮನವಾರೆ ಮೆಚ್ಚಿದ, ಮೇಲ್ಬುದ್ಧಿಯನ್ನಂತೂ ಬಾಯಿಬಿಟ್ಟು ಹೊಗಳಿದ. ಆತನ ಕಲ್ಪನೆಗೂ ಮೀರಿ ಸಂಭಾವನೆಯನ್ನು ಕೊಟ್ಟ.

ಚಿತ್ರಕಾರ ದೊರೆಯನ್ನು ನಮಸ್ಕರಿಸಿದ. ಅತ್ಯಾನಂದದಿಂದ ಮನೆಗೆ ಮರಳಿದ. ಮನೆಯಲ್ಲಿ ಮಗಳಿಗೆ ಆ ಸಂಭಾವನೆಯನ್ನು ತೋರಿಸಿ ಹೇಳಿದ– ಮಗಳೇ **ನಿನ್ನ ಪ್ರಸಂಗಾವಧಾನವೇ ನನ್ನನ್ನು ಪ್ರಾಣಾಪಾಯದಿಂದ ಪಾರುಮಾಡಿತು !**

## ೨. ಪ್ರಸಂಗಾವಧಾನ

ಒಂದು ಅಡವಿಯಲ್ಲಿ ಒಂದು ಸಿಂಹವಿತ್ತು. ಅದಕ್ಕೆ ಆಗಿನ್ನೂ ಹೊಸ ಹರಯ. ಸಿಂಹದ ನಿಜವಾದ ಸ್ವಭಾವ ಗಾಂಭೀರ್ಯ ಅದಕ್ಕೆ ಬಂದಿರಲಿಲ್ಲ. ಹೊಟ್ಟೆ ಹಸಿಯದೆ ಇಲ್ಲವೆ ತಮ್ಮನ್ನು ಯಾರಾದರೂ ಕೆಣಕದೆ ಸಿಂಹಗಳು ಅನ್ಯ ಪ್ರಾಣಿಗಳನ್ನು ಕೊಲ್ಲುವುದಿಲ್ಲವೆಂತೆ. ಈ ಹರಯದ ಸಿಂಹಕ್ಕೆ ಇನ್ನೂ ಅಷ್ಟು ದೊಡ್ಡ ಮನಸ್ಸು ಬಂದಿರಲಿಲ್ಲ. ಅದರಿಂದ, ಪ್ರಾಣಿಗಳನ್ನು ಕೊಂದು ಕೊಂದು ತನ್ನ ಗವಿಯನ್ನು ತುಂಬಿಕೊಂಡಿತ್ತು. ಅವುಗಳಲ್ಲಿ ಎಷ್ಟೋ ಪ್ರಾಣಿಗಳು ಕೊಳೆತು ನಾರುತ್ತಿದ್ದುವು.

ಒಮ್ಮೆ ಕರಡಿ, ಕಾಡಹಂದಿ, ನರಿ ಈ ಮೂರು ಪ್ರಾಣಿಗಳು ಸಿಂಹವನ್ನು ಕಾಣಲು ಹೋದುವು. ಸಿಂಹ ಅವೆಲ್ಲವುಗಳನ್ನೂ ಒಳಗೆ ಕರೆಯಿತು. ಎಲ್ಲವೂ ಒಳಗೆ ಕುಳಿತುವು.

ತುಸು ಹೊತ್ತಿನಲ್ಲಿ ಕರಡಿಗೆ ಆ ಕೊಳೆತ ನಾತದಿಂದ ತಲೆ ಚಿಟ್ಟೆನಿಸಿತು. ಅದು ಅತ್ತಿತ್ತ ನೋಡುತ್ತ ಮೂಗನ್ನು ಏರಿಸತೊಡಗಿತು. ಈ ಉದ್ಧಟ ವರ್ತನೆಯಿಂದ ಸಿಂಹದ ಕಣ್ಣು ಮೆಲ್ಲಗೆ ಕೆಂಪಾಗತೊಡಗಿದುವು.

“ ಏಕೆ ಕರಡಿಯೇ, ನನ್ನ ಅರಮನೆ ಹೊಲಸು ನಾರುತ್ತಿದೆಯೇ ? ” ಸಿಂಹ ಕೇಸರಗಳನ್ನು ನಿಮಿರಿಸುತ್ತ ಕೇಳಿತು.

“ ಬಹಳ ಹೊಲಸು – ಕೊಳಕು – ನಾರುತ್ತಿದೆ ” ಹಿಂದು – ಮುಂದೆ ವಿಚಾರಮಾಡದೆ ಕರಡಿ ನುಡಿಯಿತು.

ಸಿಂಹಕ್ಕೆ ಸಿಟ್ಟು ತಡೆಯಲಿಲ್ಲ. ಪ್ರತ್ಯಕ್ಷ ವನರಾಜನಿಗೆ ಅಪಮಾನ ! ಕೂಡಲೇ ಅದು ತನ್ನ ಪಂಜರದ ಒಂದೇ ಹೊಡೆತದಿಂದ ಕರಡಿಯನ್ನು ಸೀಳಿಹಾಕಿತು. ಕಂಡುದನ್ನಾಡಿದರೆ ಕೆಂಡದಂತಹ ಸಿಟ್ಟು, ಎಂಬುದು ಕರಡಿಗೆ ತಿಳಿದಿರಲಿಲ್ಲ. ಎಂತೆಯೇ ಪ್ರಾಣಕ್ಕೆ ಎರವಾಯಿತು.

ಈ ದುರಂತವನ್ನು ನೋಡಿ ಕಾಡುಮಿಕದ ಎದೆಯೊಡೆಯಿತು. ತನ್ನ ಗತಿಯೇನೋ ಎಂದು ಚಿಂತಿಸುತ್ತ ಕುಳಿತಿತು. ಅಷ್ಟರಲ್ಲಿ ಸಿಂಹ ಅತ್ತ ಮೋರೆಯನ್ನು ಹೊರಳಿಸಿತು !

“ ಮಿಕವೇ, ನನ್ನ ಅರಮನೆಯಲ್ಲಿ ಕೊಳಕು ವಾಸನೆ ಬರುತ್ತಿದೆಯೇ ? ” ಸಿಂಹದ ದನಿ ಗಡುಸಾಗಿಯೇ ಇತ್ತು.

ಹಂದಿಗೆ ಪ್ರಾಣಸಂಕಟವೇ ಬಂದಿತು. ಹೇಗೂ ಪಾರಾದರೆ ಸಾಕೆಂದು ಹೇಳಿತು. “ ಇಲ್ಲ ಇಲ್ಲ, ಗಮಗಮ ಸುವಾಸನೆ ಬರುತ್ತಿದೆ. ”

" ಎಲೆ ಸುಳ್ಳುಗಾರಾ........" ಮಾತು ಮುಗಿಯುವಷ್ಟರಲ್ಲಿಯೇ ಕಾಡಮಿಕ ಸಿಂಹದ ಪಂಜರದ ಹೊಡೆತಕ್ಕೆ ಬಲಿಯಾಗಿ ಭೂಮಿಗೊರಗಿತ್ತು.

ನರಿ ಇದೆಲ್ಲವನ್ನು ತೆರೆದ ಕಣ್ಣುಗಳಿಂದ ನೋಡುತ್ತಿತ್ತು. ಈ ಅವಿವೇಕ ಅರಸನ ಆಳಿಕೆಯಲ್ಲಿ ಸತ್ಯಕ್ಕೂ ಶಿಕ್ಷೆ, ಸುಳ್ಳಿಗೂ ಶಿಕ್ಷೆ! ಎಂದಮೇಲೆ ಬಾಯಿಬಿಡುವುದು ಹೇಗೆ? ಮುಂದುಗಾಣದೆ ಕುಳಿತಿತ್ತು ನರಿ. ಆದರೂ ಅದು ಪೂರಾ ಎದೆಯೊಡೆದಿರಲಿಲ್ಲ. ನರಿಗೆ ಪ್ರಸಂಗಾವಧಾನ ಬಹಳವೆಂತೆ.

ಈಗ ಸಿಂಹ ನರಿಯತ್ತ ಹೊರಳಿ ಕೇಳಿತು.

" ನರಿನಾಯ ಕಾ, ನನ್ನ ಅರಮನೆಯಲ್ಲಿ ಕೊಳೆತ ವಾಸನೆ ಬರುತ್ತಿದೆಯೇ ? "

" ನನಗೆ ನೆಗಡಿಯಾಗಿದೆ ಪ್ರಭುವೇ, ಏನೂ ವಾಸನೆ ತಿಳಿಯದು " ಎಂದಿತು ನರಿ.

ನರಿಯ ಜಾಣತನಕ್ಕೆ ಸಿಂಹ ಮನವಾರೆ ಮೆಚ್ಚಿತು. ಕಾಡುಮಿಕದ ಪೂರಾ ಮಾಂಸ ವನ್ನು ಅದಕ್ಕೆ ಮೆಚ್ಚು ಕೊಟ್ಟಿತು. ಹೀಗೆ ನರಿಯ **ಪ್ರಸಂಗಾವಧಾನವೇ ಅದನ್ನು ಪ್ರಾಣಾಪಾಯದಿಂದ ಪಾರುಮಾಡಿತು.**

## ೩. ಪ್ರಸಂಗಾವಧಾನ

ಇಂಗ್ಲಿಷರಲ್ಲಿ ಜನಜನಿತವಾದ ಕತೆಯಿದು. ಹಿಂದಕ್ಕೆ ಲಂಡನ್ ಪಟ್ಟಣದಲ್ಲಿ ಒಬ್ಬ ಸುಪ್ರಸಿದ್ಧ ಚಿತ್ರಗಾರನಿದ್ದ. ಆತನದೊಂದು ದೊಡ್ಡ ಕಲಾ ಶಾಲೆಯಿತ್ತು. ಅಂದ–ಚೆಂದದ ಮೂರ್ತಿಗಳನ್ನು ಮಾಡುವುದರಲ್ಲಿಯೂ ಚೆಲುವಿನ ಚಿತ್ರಗಳನ್ನು ಚಿತ್ರಿಸುವುದರಲ್ಲಿಯೂ ಆತನ ಕೀರ್ತಿ ಎಲ್ಲೆಲ್ಲಿಯೂ ಕೇಳಿಬರುತ್ತಿದ್ದಿತು. ಆತನು ತನ್ನ ಕಲಾಶಾಲೆಯ ಮೂರನೆಯ ನೆಲೆಮಾಡದಲ್ಲಿ ಸ್ವಂತದ ಕಲಾಮಂದಿರವನ್ನು ಮಾಡಿಕೊಂಡಿದ್ದ.

ಒಂದು ದಿನ ಆತನು ಸುಂದರವಾದ ಚಿತ್ರವನ್ನು ಬರೆದಿದ್ದ, ಅದಕ್ಕೆ ಬಣ್ಣ ಬಣ್ಣದ ಒಪ್ಪವನ್ನು ಕೊಟ್ಟಿದ್ದ. ಅವನ ಕಲ್ಪನೆಗೂ ಮೀರಿ ಅದು ಸುಂದರವಾಗಿತ್ತು. ಅದನ್ನು ದೂರ ದೂರದಿಂದ ನೋಡೋಣವೆಂದು ಆತನು ಮೆಲ್ಲನೆದ್ದು ಹಿಂದೆ ಸರಿಯಹತ್ತಿದ. ಅವನ ದೃಷ್ಟಿಯೆಲ್ಲ ಆ ಚಿತ್ರದಲ್ಲಿಯೇ ನಟ್ಟಿತ್ತು; ಹೊರಗಿನ ಜಗತ್ತಿನ ಅರಿವು ಮರೆತಿತ್ತು; ಆ ಆನಂದದಲ್ಲಿ ತಾನೇ ತಾನಾಗಿದ್ದ.

ಹೀಗೆಯೇ ಹಿಂದೆ ಸರಿಯುತ್ತ ಸರಿಯುತ್ತ ಮೆಟ್ಟಿಲುಗಳ ವರೆಗೂ ಮುಟ್ಟಿದ. ಅದಾವುದರ ಅರಿವೂ ಅವನಿಗಿರಲಿಲ್ಲ. ಇನ್ನೊಂದು ಹೆಜ್ಜೆ ಹಿಂದೆ ಸರಿದಿದ್ದರೆ, ಮೆಟ್ಟಿಲು ತಗ್ಗಿನಲ್ಲಿ ಬೀಳುತ್ತಿದ್ದ, ಪ್ರಾಣಕ್ಕೆ ಎರವಾಗುತ್ತಿದ್ದ.

ಅಲ್ಲಿಯೇ ಕುಳಿತಿದ್ದ ಆಳು ಅದನ್ನು ನೋಡಿದ; ಕೂಡಲೆ ಮಸಿಯನ್ನು ತಕ್ಕೊಂಡ; ಚಿತ್ರದ ಮೇಲೆ ಚೆಲ್ಲಿಬಿಟ್ಟ! ' ಅಯ್ಯೋ, ನನ್ನ ಚೆಲುವಿನ ಚಿತ್ರವನ್ನು ಹಾಳು ಮಾಡಿಬಿಟ್ಟೆ ಯಲ್ಲ ' ಎನ್ನುತ್ತ ಚಿತ್ರಕಾರ ಮುಂದೆ ಬಂದು ಆಳನ್ನು ಹೊಡೆಯಹೋದ.

ಆಗ ಆಳು ನಡೆದ ಸನ್ನಿವೇಶವೆಲ್ಲವನ್ನೂ ವಿವರಿಸಿದ. ನಿಮ್ಮ ಜೀವ ಬದುಕಿದ್ದರೆ ಇಂತಹ ಸಾವಿರಾರು ಚಿತ್ರಗಳನ್ನು ಸೃಷ್ಟಿಸಬಲ್ಲಿರಿ. ನಿಮ್ಮ ಜೀವಕ್ಕಿಂತ ಅದರ ಬೆಲೆಯೇನೂ ಹೆಚ್ಚಿನದಲ್ಲ, ಎಂದು ಸಮಾಧಾನ ಹೇಳಿದ.

ಆಳಿನ ಪ್ರಸಂಗಾವಧಾನಕ್ಕೆ ಚಿತ್ರಕಾರ ಬೆರಗಾದ; ಆತನಿಗೆ ಬಹುವಾಗಿ ಮೆಚ್ಚುಕೊಟ್ಟ. **ಆಳಿನ ಪ್ರಸಂಗಾವಧಾನವೇ ಆ ಚಿತ್ರಕಾರನನ್ನು ಪ್ರಾಣಾಪಾಯದಿಂದ ಪಾರು ಮಾಡಿತು.**

**ವಿವರಣ:** ಇಲ್ಲಿ ಮೂರು ಕತೆಗಳಿವೆ. ಸನ್ನಿವೇಶಗಳು ಬೇರೆ ಬೇರೆ. ಆದರೆ ಅವೆಲ್ಲವೂ ಒಂದೇ ವಿಚಾರದ ತಳಗಟ್ಟಿನ ಮೇಲೆ ರಚಿತವಾಗಿವೆ. ಪ್ರಸಂಗಾವಧಾನದ ಪರಿಣಾಮವನ್ನು ಕುರಿತ ಕತೆಗಳಿವು. ಒಂದೇ ವಿಚಾರವನ್ನು ಕುರಿತು ಬೇರೆ ಬೇರೆ ಸನ್ನಿವೇಶಗಳನ್ನು ಕಲ್ಪಿಸಬಹುದು, ಬೇರೆ ಬೇರೆ ಕತೆಗಳನ್ನು ಹೆಣೆಯಬಹುದು.

ಕತೆಗಳನ್ನು ಬರೆಯುವ ಬಗೆಗೆ ಹಿಂದಿನ ಹೊತ್ತಗೆಗಳಲ್ಲಿ ವಿವರವಾಗಿ ಹೇಳಿದೆ. ಅವುಗಳನ್ನೇ ಇಲ್ಲಿಯೂ ಅನುಸರಿಸಬೇಕು. ಕಥಾಲೇಖನ ಒಂದು ಸರಸವಾದ ಸಾಹಿತ್ಯ. ಆದನ್ನು ಅಚ್ಚುಕಟ್ಟಾಗಿ ಬರೆದಷ್ಟೂ ಒಳ್ಳೆಯದು. ಆದರಿಂದ,

ಅ. ಬರೆಯಬೇಕಾದ ವಿಚಾರವನ್ನು ಮೊದಲು ಸರಿಯಾಗಿ ತಿಳಿದುಕೊಳ್ಳಬೇಕು.

ಆ. ಆಮೇಲೆ ಅದಕ್ಕೆ ತಕ್ಕ ಸನ್ನಿವೇಶದ ಕಲ್ಪನೆ ಮಾಡಿಕೊಳ್ಳಬೇಕು.

ಇ. ಕತೆಯಲ್ಲಿ ಒಂದೇ ವಿಚಾರ, ಸ್ವಲ್ಪವೇ ಪಾತ್ರಗಳು ಇರಬೇಕು.

ಈ. ಬಳಿಕ ಕತೆಯ ಓಟಕ್ಕೆ ಅನುಕೂಲವಾಗುವಂತೆ ಮುದ್ದೆಗಳನ್ನು ಸಂಕ್ಷೇಪವಾಗಿ ಬರೆದುಕೊಳ್ಳಬೇಕು. ಅವುಗಳನ್ನೇ ತುಸು ತುಸು ಬೆಳೆಸುತ್ತ ಮುಂದುವರಿಸಬೇಕು.

ಉ. ಕೊಟ್ಟ ವಿಚಾರದ ವಾಕ್ಯ ಕೊನೆಯಲ್ಲಿ ಬರುವಂತೆ ಪ್ರಯತ್ನಿಸಿರಿ.

---

## (ಬ) ಮುಖ್ಯ ಮಾತುಗಳಿಗೆ ತಕ್ಕಂತೆ ಕತೆ ಕಟ್ಟುವುದು

**ಮುಖ್ಯ ಮಾತುಗಳು:** ಬಾಡಿಗೆ ಚಕ್ಕಡಿಯವ– ಬೆಳಗಿಗೆ ಪ್ರಯಾಣ– ಮಳೆಗಾಲ– ಚಕ್ಕಡಿ ಕೆಸರಲ್ಲಿ ಸಿಕ್ಕು ನಿಂತಿತು– ಬಾಡಿಗೆದಾರ ಎತ್ತುಗಳನ್ನು ಹೊಡೆದ– ಚಕ್ಕಡಿ ಕೀಳಲಿಲ್ಲ– ದೇವರನ್ನು ಬೇಡಿಕೊಂಡ - ದೇವರು ಪ್ರತ್ಯಕ್ಷನಾದ– ಪ್ರಯತ್ನಕ್ಕೆ ಮಾತ್ರ ಪರಮೇಶ್ವರ ಫಲಕೊಡುವ ಎಂದು ದೇವ ಹೇಳಿದ.

### ೧. ತನ್ನ ನೆರವು ತನಗೆ

ಗುಳೇದ ಫಕೀರನ ಉಪಜೀವನದ ಉದ್ಯೋಗವೆಂದರೆ ಚಕ್ಕಡಿ ಬಾಡಿಗೆ ಹೊಡೆಯುವುದು. ಆದಕ್ಕಾಗಿ ಎರಡು ಎತ್ತು ಒಂದು ಚಕ್ಕಡಿಯನ್ನು ಇಟ್ಟಿದ್ದ. ವ್ಯಾಪಾರಿಗಳ ಸರಕನ್ನು ಊರಿಂದ ಊರಿಗೆ ಒಯ್ಯುವುದು, ಬಂದಷ್ಟು ಬಾಡಿಗೆಯಿಂದ ಬಾಳುವೆಯನ್ನು ಸಾಗಿಸುವುದು ಅವನ ನಿತ್ಯದ ರೀತಿ ನೀತಿ.

ಒಮ್ಮೆ ಒಬ್ಬ ವ್ಯಾಪಾರಸ್ಥನ ಸರಕನ್ನು ಪರಊರಿಗೆ ಒಯ್ಯಲು ಫಕೀರ ಬಾಡಿಗೆ ಗೊತ್ತು ಮಾಡಿಕೊಂಡ. ಹಿಂದಿನ ರಾತ್ರಿಯೇ ಚಕ್ಕಡಿಯಲ್ಲಿ ಸರಕನ್ನು ತುಂಬಿದ. ನಸುಕಿನಲ್ಲಿಯೇ ಹೊರಡುವುದಾಗಿ ಗೊತ್ತುಮಾಡಿಕೊಂಡು ಮಲಗಿದ, ನಿದ್ದೆ ಹೋದ.

ಮಳೆಗಾಲ ದಿವಸ. ರಾತ್ರಿಯೆಲ್ಲ ಮಳೆ ಚೆನ್ನಾಗಿ ಸುರಿಯಿತು. ಎಲ್ಲೆಲ್ಲಿಯೂ ನೀರೇ ನೀರು, ಕೆಸರೇ ಕೆಸರು. ಫಕೀರ ಬೆಳಗಿಗೆ ಎದ್ದ, ರೊಟ್ಟಿಬುತ್ತಿಯನ್ನು ಕಟ್ಟಿಕೊಂಡ, ಚಕ್ಕಡಿಗೆ ಎತ್ತುಗಳನ್ನು ಹೂಡಿದ, ಚಾ ಬಸವ ಎಂದ.

ಹಾದಿಯುದ್ದಕ್ಕೂ ಕೆಸರು. ಚಕ್ಕಡಿ ಮೆಲ್ಲನೆ ಸಾಗಿತ್ತು. ತುಸು ದೂರದ ಮೇಲೆ ಹಳ್ಳದ ಹುದುಲು ಬಂದಿತು. ಚಕ್ಕಡಿಯ ಗಾಲಿಗಳು ಅರ್ಧಕ್ಕರ್ಧ ಸಿಕ್ಕಿಕೊಂಡು ಬಿಟ್ಟುವು ಫಕೀರ ಎತ್ತುಗಳನ್ನು ಬೆದರಿಸಿದ, ಬಾರುಕೋಲಿನಿಂದ ಹೊಡೆದ. ಎತ್ತುಗಳೂ ಕಸುವು ಮಾಡಿ ಎಳೆದುವು. ಆದರೂ ಗಾಲಿಗಳು ಮಿಟ್ಟುಮಿಸುಕಲಿಲ್ಲ. ಚಕ್ಕಡಿ ಇದ್ದಲ್ಲಿಯೇ ಇತ್ತು.

ಫಕೀರನಿಗೆ ದಿಕ್ಕು ತೋಚದಂತಾಯಿತು. ಸಂತೆಯ ಹೊತ್ತಿಗೆ ಸರಕು ನೆರೆಯೂರಿಗೆ ಹೋಗಬೇಕಾಗಿತ್ತು. ಅದು ಹೊತ್ತಿಗೆ ಸರಿಯಾಗಿ ಮುಟ್ಟಿದರೇ ಅವನಿಗೆ ಬಾಡಿಗೆಯ ಹಣ. ಇಲ್ಲವಾದರೆ ಬರಿಗೈಯಿಂದ ಮನೆಗೆ ಮರಳುವುದು.

ತುಸುಹೊತ್ತು ತಡೆದ, ಮತ್ತೆ ಎತ್ತುಗಳನ್ನು ಚಪ್ಪರಿಸಿದ. ಮೈಮೇಲೆ ಬಾರು ಕೀಳುವಂತೆ ಬಡಿದ. ಆದರೂ ಉಪಯೋಗವಾಗಲಿಲ್ಲ. ಅವನಿಗೆ ಇನ್ನುಳಿದ ಉಪಾಯವೆಂದರೆ ದೈವದ ಮೇಲೆ ಕೈಯೂರುವುದೊಂದೇ. ಆಗ ದೇವರನ್ನು ಬೇಡಿಕೊಂಡ:

"ದೇವರೇ, ಈ ಬಡವನ ಬೆಂಬಲಕ್ಕೆ ಬಾ. ಈ ಸಂಕಟದಿಂದ ಪಾರುಮಾಡು."

ಫಕೀರನ ಬೇಡಿಕೆಗೆ ದೇವರು ಪ್ರತ್ಯಕ್ಷನಾದ; ಕೇಳಿದ.— "ನೀನು ನನ್ನನೇಕೆ ಕರೆದೆ?"

"ದೇವಾ, ನನ್ನ ಚಕ್ಕಡಿ ಕೆಸರಿನಲ್ಲಿ ಸಿಕ್ಕಿಕೊಂಡಿದೆ. ಎಷ್ಟು ಹೊಡೆದರೂ ಎತ್ತುಗಳು ಎಳೆಯಲೊಲ್ಲವು. ಸಂತೆಯ ಹೊತ್ತಿಗೆ ಸರಿಯಾಗಿ ಸರಕನ್ನು ನೆರೆಹಳ್ಳಿಗೆ ಒಯ್ಯಬೇಕು, ಸೆಟ್ಟರಿಗೆ ಮುಟ್ಟಿಸಬೇಕು. ತಡವಾದರೆ ಬಾಡಿಗೆ ಹಣಕ್ಕೇ ಸೊನ್ನೆ. ನನ್ನ ಆಟವೆಲ್ಲ ನಿಂತಿದೆ. ದೇವಾ, ಈಗ ನೀನೇ ನನ್ನ ಚಕ್ಕಡಿಯನ್ನು ಮುನ್ನಡೆಸಬೇಕು, ಈ ಬಡವನನ್ನು ಕಾಪಾಡಬೇಕು." ಫಕೀರ ಚಕ್ಕಡಿಯ ಮೇಲೆ ಕುಳಿತೇ ಇಷ್ಟೆಲ್ಲ ಮಾತನಾಡಿದ.

"ಅಯ್ಯೋ, ಮೂರ್ಖಾ ನಿನಗಾಗಿ ನೀನು ದುಡಿಯಲು ಸಿದ್ಧನಿಲ್ಲ. ಎಂದಮೇಲೆ ನಾನೇಕೆ ನಿನ್ನ ಸಲುವಾಗಿ ದುಡಿಯಬೇಕು? ತನಗಾಗಿ ತಾನು ದುಡಿಯುವವನಿಗೇ ದೇವರ ಬೆಂಬಲ ಸಿಕ್ಕುವುದು. ಚಕ್ಕಡಿಯ ಮೇಲೆ ಕುಳಿತು ಎತ್ತುಗಳನ್ನು ಹೊಡೆದ ಮಾತ್ರಕ್ಕೆ ನಿನ್ನ ಕೆಲಸವಾಗಲಿಲ್ಲ. ಕೆಳಗೆ ಇಳಿ. ಗಾಲಿಗೆ ಹೆಗಲು ಹಚ್ಚಿ ಮೇಲಕ್ಕೆತ್ತು. ಚಕ್ಕಡಿ ತಾನೇ ಮುನ್ನಡೆಯುವುದು" ದೇವರು ಹೇಳಿದ.

ಫಕೀರ ಕೆಳಕ್ಕೆ ಇಳಿದ, ಹೆಗಲು ಹಚ್ಚಿ ಚಕ್ಕಡಿಯನ್ನು ಎತ್ತಿದ. ದೇವರು ಎತ್ತುಗಳನ್ನು 'ಚಾ' ಎಂದ. ಚಕ್ಕಡಿ ಸರಸರ ಮುಂದೆ ಸಾಗಿತು.

ಫಕೀರನಿಗೆ ಹಿಡಿಸಲಾರದಷ್ಟು ಹಿಗ್ಗಾಯಿತು. ಟಣ್ಣನೆ ಜಿಗಿದು ಬಂದ, ಉದ್ದಿಗೆಯ ಮೇಲೆ ಕುಳಿತ, ಬಸವಣ್ಣಗಳ ಬೆನ್ನ ಮೇಲೆ ಕೈಯಿಟ್ಟ. ಹೊತ್ತಿಗೆ ಸರಿಯಾಗಿ ಸೆಟ್ಟಿಗೆ ಸರಕು ಮುಟ್ಟಿತು; ಫಕೀರನಿಗೆ ಕೈತುಂಬ ಬಾಡಿಗೆ ಹಣ ಸಿಕ್ಕಿತು. ಫಕೀರ ದೇವರನ್ನು ಮತ್ತೆ ಮತ್ತೆ ಹಾಡಿ ಹರಸಿದ ! ಯಾಕೆ ?

**ಮುಖ್ಯ ಮಾತುಗಳು:** ಹಿಂದೀ ಮಾತಾಡುವ ಸೇನಾಪತಿ— ಆಗಾಗ ಸೈನಿಕರ ವಿಚಾರಣೆ— ಮೂರು ಪ್ರಶ್ನೆಗಳು— (೧) ನಿನ್ನ ವಯಸ್ಸೆಷ್ಟು ? (೨) ಸೈನ್ಯದಲ್ಲಿ ಸೇರಿ ಎಷ್ಟು ಕಾಲವಾಯಿತು ? (೩) ಊಟ–ವಸತಿಗಳು ಸರಿಯಾಗಿವೆಯೇ ?— ಹೊಸದಾಗಿ ಸೈನ್ಯವನ್ನು ಸೇರಿದ ತೆಲಗು ಸೈನಿಕ— ಹಿಂದೀ ತಿಳಿಯದು— ಸೇನಾಪತಿಯ ಪ್ರಶ್ನೆಗಳಿಗೆ ಉತ್ತರವನ್ನು ಪಾಠ ಮಾಡಿದ್ದ— ಸೇನಾಪತಿಯು ಪ್ರಶ್ನೆಗಳು— ಕ್ರಮತಪ್ಪಿ ೨ನೆಯ ಪ್ರಶ್ನೆ ಮೊದಲು— ಸೈನಿಕ ಮೊದಲ ಕ್ರಮದಂತೆ ಉತ್ತರಕೊಟ್ಟ— ಎಲ್ಲರೂ ನಕ್ಕರು— ಯಾಕೆ ?

## ೨. ಕಲಿಸಿದ ಮಾತು ಕಡೆ ಹಾಯಿಸಲಾರದು

ಯುಕ್ತ ಪ್ರಾಂತದ ಸೇನಾಪತಿಯೊಬ್ಬ. ಆತನು ಮಹಾ ಕರುಣಾಳು. ತನ್ನ ಶಾಖೆಯ ಸೈನಿಕರನ್ನು ಮಕ್ಕಳಂತೆ ನೋಡುತ್ತಿದ್ದ. ವಾರಕ್ಕೆ ಒಂದೆರಡಾವರ್ತಿ ತನ್ನ ಸೈನಿಕರನ್ನು ಕಾಣುವುದು, ಅವರ ಯೋಗಕ್ಷೇಮವನ್ನು ವಿಚಾರಿಸುವುದು ಆತನ ರೂಢಿ. ಪ್ರತಿ ಸಲವೂ ಕೇಳುತ್ತಿದ್ದುದು ಮೂರೇ ಮೂರು ಪ್ರಶ್ನೆಗಳು: ೧. ನಿನ್ನ ವಯಸ್ಸೆಷ್ಟು ? ೨. ದಲ್ಲಿ ಸೇರಿ ಎಷ್ಟು ಕಾಲವಾಯಿತು ? ೩. ಊಟವಸತಿಗಳೆರಡೂ ಸರಿಯಾಗಿವೆಯೋ ? ಈ ಸಂಭಾಷಣೆಯೆಲ್ಲ ಹಿಂದಿಯಲ್ಲಿಯೇ ನಡೆಯುತ್ತಿದ್ದಿತು.

ಸೇನಾಪತಿಯ ಈ ಸಹೃದಯತೆ ಆ ಸೈನಿಕರಿಗೆಲ್ಲ ಒಂದು ಹುಚ್ಚಾಟವಾಗಿ ತೋರುತ್ತಿತ್ತು. ಆ ಮೂರು ಪ್ರಶ್ನೆಗಳ ಉತ್ತರಗಳನ್ನು ಎಲ್ಲರೂ ಪಾಠಮಾಡಿ ಬಿಟ್ಟಿದ್ದರು. ಸೇನಾಪತಿ ಅವರನ್ನು ಕಂಡು ಮಾತನಾಡಿಸುವುದೊಂದೇ ತಡ, ಎಲ್ಲರೂ ಸಾಲಾಗಿ ಉತ್ತರಗಳನ್ನು ಹೇಳಿಬಿಡುತ್ತಿದ್ದರು.

ಅದೇ ಸೈನ್ಯದಲ್ಲಿ ಮಲೆಯಾಳಿ ಸೈನಿಕನೊಬ್ಬ ಹೊಸತಾಗಿ ಬಂದ. ಆತನಿಗೆ ಹಿಂದೀ ಏನೂ ತಿಳಿಯದು. ಗೆಳೆಯ ಸೈನಿಕರು ಆತನಿಗೆ ಸೇನಾಪತಿಯ ಸ್ವಭಾವವನ್ನು ತಿಳಿಸಿದರು. ಗೊತ್ತಾದ ಉತ್ತರಗಳನ್ನೂ ಸಾಲಾಗಿ ಪಾಠ ಮಾಡಿಸಿದರು.

ಪದ್ಧತಿಯಂತೆ ಸೇನಾಪತಿ ಸೈನಿಕರ ವಿಚಾರಣೆಗೆ ಬಂದ. ಒಬ್ಬೊಬ್ಬರ ಯೋಗಕ್ಷೇಮವನ್ನು ವಿಚಾರಿಸತೊಡಗಿದ. ಅಂದೇಕೋ ಪ್ರಶ್ನೆಗಳು ಹಿಂದುಮುಂದಾಗಿ ಬರುತ್ತಿದ್ದುವು. ಆದರೂ ಸೈನಿಕರಿಗೆ ಹಿಂದೀ ತಿಳಿಯುತ್ತಿದ್ದಿತು. ಅವರೆಲ್ಲ ಸರಿಯಾಗಿ ಉತ್ತರ ಕೊಟ್ಟರು.

ಮಲೆಯಾಳಿ ಸೈನಿಕನ ಸರತಿ ಬಂದಿತು. ಸೇನಾಪತಿಗೆ ಆತ ಅತಿ ಹೊಸಬನಾಗಿ ಕಂಡ. ಆದುದರಿಂದ, ಲಕ್ಷಪೂರ್ವಕವಾಗಿಯೇ ಆತನನ್ನು ಕೇಳಲಾರಂಭಿಸಿದ. ಮಾತ್ರ ಪ್ರಶ್ನೆಗಳು ಹಿಂದುಮುಂದಾಗಿದ್ದುವು.

"ನೀನು ಸೈನ್ಯದಲ್ಲಿ ಸೇರಿ ಎಷ್ಟು ಕಾಲವಾಯಿತು ?" ಸೇನಾಪತಿ.

"ಇಪ್ಪತ್ತೊಂದು ವರುಷ ಮಾತ್ರ" ಸೈನಿಕನ ಉತ್ತರ.

"ಎಷ್ಟು ಎಳೆಕನಾಗಿ ತೋರುತ್ತಿರುವೆಯಲ್ಲ! ನಿನ್ನ ವಯಸ್ಸೆಷ್ಟು ?"

"ಮೂರು ವರುಷ ಮಾತ್ರ"

"ಏನಿದು ? ಹುಚ್ಚನಿದ್ದೀಯೋ, ಅಥವಾ ನಿನ್ನನ್ನು ಸೈನ್ಯದಲ್ಲಿ ಸೇರಿಸಿಕೊಂಡ ನಾನೇ ಹುಚ್ಚನೋ ?"

"ಎರಡೂ ಸರಿಯಾಗಿವೆ" ಮಲೆಯಾಳಿ ಹೇಳಿದ.

ಸುತ್ತಲಿನ ಸೈನಿಕರೆಲ್ಲ ಕೊಳ್ಳನೆ ನಕ್ಕರು. ಸೇನಾಪತಿ ಮಾತಿಲ್ಲನೆ ಅವನನ್ನು ನೋಡುತ್ತಿದ್ದ. ಮಲೆಯಾಳಿ ಸೈನಿಕ ಪೆಚ್ಚು ಮೋರೆ ಮಾಡಿಕೊಂಡು ನಿಂತುಬಿಟ್ಟ. ಆತನಿಗೂ ಹಿಂದೀ ತಿಳಿದಿದ್ದರೆ........ ?

**ಮುಖ್ಯ ಮಾತುಗಳು:** ಅರಬ ಕುದುರೆಯನ್ನು ಸಾಕಿದ್ದ— ಕಳ್ಳನೊಬ್ಬ ಅದನ್ನು ಅಪಹರಿಸಿಕೊಂಡು ಒಯ್ಯುತ್ತಿದ್ದ— ಅರಬ ಬೆನ್ನಟ್ಟಿದ— ಕಳ್ಳನನ್ನು ಪೋಲೀಸರ ವಶಕ್ಕೆ ಕೊಟ್ಟ— ನ್ಯಾಯ ವಿಚಾರಣೆ— ಕಳ್ಳ ಕುದುರೆ ತನ್ನದೆಂದೇ ಸಾಧಿಸಿದ— ಕೂಡಲೆ ಅರಬ ಕುದುರೆಯ ಮೋರೆಯ ಮೇಲೆ ಬಟ್ಟೆಯನ್ನು ಒಗೆದ— ಪ್ರಶ್ನೆ: ಕುದುರೆಯ ಯಾವ ಕಣ್ಣು ಕುರುಡಾಗಿದೆ ?— ಕಳ್ಳನ ಹೇಳಿಕೆ: ಬಲಗಣ್ಣು— ಅರಬ ಅರಿವೆಯನ್ನು ತೆಗೆದು ತೋರಿಸಿದ: ಯಾವ ಕಣ್ಣಿನಲ್ಲಿಯೂ ಕುರುಡಿಲ್ಲ— ಮುಂದೆ ಕಳ್ಳನ ಗತಿ ಏನಾಗಿರಬೇಕು ?

ಒಬ್ಬ ಅರಬನಲ್ಲಿ ಒಂದು ಕುದುರೆಯಿತ್ತು. ಅದನ್ನು ಆತನು ಬಲು ಪ್ರೀತಿಯಿಂದ ಸಾಕಿಸಲಹುತ್ತಿದ್ದ. ಕುದುರೆ ಬಲು ಚೆಲುವಾಗಿತ್ತು, ಚಪಲವಾಗಿತ್ತು.

ಆ ಕುದುರೆಯನ್ನು ಒಮ್ಮೆ ಒಬ್ಬ ಕಳ್ಳ ನೋಡಿದ. ಹೇಗಾದರೂ ಮಾಡಿ ಅದನ್ನು ಕಳವು ಮಾಡಬೇಕೆಂದು ಹೊಂಚು ಹಾಕಿದ.

ಒಂದು ರಾತ್ರಿ ಹನ್ನೆರಡು ಗಂಟೆಯ ಸಮಯ. ಅರಬ ಒಳಮನೆಯಲ್ಲಿ ಮಲಗಿದ್ದ. ಕುದುರೆ ಹೊರಗೆ ಲಾಯದಲ್ಲಿ ನಿಂತಿತ್ತು. ಕಳ್ಳ ಇದೇ ಸಮಯವೆಂದೆಣಿಸಿದ. ಮೆತ್ತಗೆ ಲಾಯವನ್ನು ಹೊಕ್ಕ, ಕುದುರೆಯನ್ನು ಬಿಚ್ಚಿ ಹೊರಗೆ ತಂದ.

ಇದ್ದಕ್ಕಿದ್ದ ಹಾಗೆ ಕುದುರೆ ಕೆನೆಯಿತು. ಅಪರಾತ್ರಿಯಲ್ಲಿ ಈ ಸದ್ದಿನಿಂದ ಅರಬನಿಗೆ ಎಚ್ಚರವಾಯಿತು. ತಡವಿಲ್ಲದೆ ಹೊರಗೆ ಬಂದ. ಅಷ್ಟರಲ್ಲಿ ಕಳ್ಳನು ಕುದುರೆಯನ್ನು ತುಸು ದೂರ ಒಯ್ದಿದ್ದ.

ಅರಬ ಆವನನ್ನು ಬೆನ್ನಟ್ಟಿದ. ಸ್ವಲ್ಪ ದೂರದಲ್ಲಿಯೇ ಕಳ್ಳ ಸಿಕ್ಕಬಿಟ್ಟ. ಅವನನ್ನು ಪೋಲೀಸರ ವಶಕ್ಕೆ ಕೊಟ್ಟು ಅರಬ ಮನೆಗೆ ಹಿಂದಿರುಗಿದ.

ಮರುದಿನ ನ್ಯಾಯಾಧೀಶರಲ್ಲಿ ವಿಚಾರಣೆ ನಡೆಯಿತು.......

(ಉಳಿದ ಕತೆಯನ್ನು ಮುಖ್ಯ ಮಾತುಗಳ ಸಾಹಾಯ್ಯದಿಂದ ನೀವೇ ಪೂರ್ಣ ಮಾಡಿರಿ. ಮತ್ತು ಕತೆಗೆ ತಕ್ಕ ತಲೆಬರಹವನ್ನು ನೋಡಿರಿ.)

**ಮುಖ್ಯ ಮಾತುಗಳು:** ಹತ್ತಿಯನ್ನು ಮಾರಲು ಒಕ್ಕಲಿಗ ಪಟ್ಟಣಕ್ಕೆ ಹೋಗುವುದು— ಹತ್ತಿಯ ಮಾರಾಟ — ಸಾವಿರಾರು ರೂಪಾಯಿ ಸಹಿತ ಮನೆಗೆ ಮರುಳುವಿಕೆ — ಚಕ್ಕಡಿಯ ಗಾಲಿಯ ಹಳಿ ಸಡಿಲಾಗಿತ್ತು — ಹಳಿ ಕಟ್ಟಿಸಲು ಒಡನಾಡಿಗಳ ಹೇಳಿಕೆ — ಒಕ್ಕಲಿಗನ ನಿರಾಕರಣ — ಹೊತ್ತು ಮುಳುಗಿತ್ತು — ಉಳಿದ ಚಕ್ಕಡಿಗಳು ಸರಸರ ದೂರ ದೂರ ಹೋದುವು — ಈ ಒಕ್ಕಲಿಗನೊಬ್ಬನೇ ಹಿಂದೆ— ದಾರಿಯಲ್ಲಿ ಹಳಿ ಬಿಚ್ಚಿ ಬಿಟ್ಟಿತು— ಸರಿಪಡಿಸಲು ಒಕ್ಕಲಿಗ ಇಳಿದ— ಕಳ್ಳರ ಹಾವಳಿ — ಹಿಡಿಗೆ ಆಶಿಸಿ ಪಡಿಯನ್ನು ಕಳೆದುಕೊಂಡ..................................................................................................

..................................................................................................

..................................................................................................

ಗೆಳೆಯ ಒಕ್ಕಲಿಗರೆಲ್ಲ ಚಕ್ಕಡಿಗಳನ್ನು ಕಟ್ಟಿದರು. ಕಲ್ಲಪ್ಪನೂ ಕಟ್ಟಿದ. ಅವನ ಚಕ್ಕಡಿಯ ಒಂದು ಗಾಲಿಯ ಹಳಿ ಸಡಿಲಾಗಿತ್ತು. ಅದಕ್ಕೆ ಆಗಲೆ ಹಳಿ ಕಟ್ಟಿಸಲು ಉಳಿದವರು ಹೇಳಿದರು. ಏಕೆಂದರೆ, ಆಗ ಎರಡು ತಾಸು ರಾತ್ರಿಯಾಗಿತ್ತು. ಅಲ್ಲದೆ ಗುಡ್ಡದ ದಾರಿ ನಡುವೆ, ಕಳ್ಳರು-ಕಾಕರ ಹಾವಳಿ. ಎಲ್ಲರೂ ಬೇಗನೆ ಮನೆ ಸೇರಬೇಕಾಗಿತ್ತು.

ಕಲ್ಲಪ್ಪ ಅವರ ಮಾತನ್ನು ಒಪ್ಪಲಿಲ್ಲ. ಏಕೆಂದರೆ, ಈಗ ಚಕ್ಕಡಿಯಲ್ಲಿ ಒಜ್ಜೆಯೇನೂ ಇರಲಿಲ್ಲ. ಅಲ್ಲದೆ, ಕಾಸನ್ನು ಖರ್ಚು ಮಾಡಬೇಕೆಂದರೆ ಪ್ರಾಣಸಂಕಟ ಅವನಿಗೆ. ಹತ್ತಿರ ಸಾವಿರಾರು ರೂಪಾಯಿಗಳಿದ್ದರೂ ಗಾಲಿಯನ್ನು ತಿದ್ದಿಸಲಿಲ್ಲ. ಹಾಗೆಯೇ ಸಾಗಿದ.

ಗಾಲಿಯ ಹಳಿ ಸಡಿಲಿದುದರಿಂದ ಕಲ್ಲಪ್ಪ ಮೆಲ್ಲನೆ ಸಾಗಿದ್ದ. ಉಳಿದವರೆಲ್ಲ ಗಡಗಡ ನಡೆಸುತ್ತಿದ್ದರು. ಹೀಗಾಗಿ ತುಸು ಹೊತ್ತಿನಲ್ಲಿಯೇ ಕಲ್ಲಪ್ಪ ಬಹಳ ಹಿಂದುಳಿದುಬಿಟ್ಟ. ಎಲ್ಲರ ಹತ್ತಿರವೂ ತುಂಬಾ ಹಣವಿತ್ತು. ಅಲ್ಲದೆ ಗುಡ್ಡ ಸಮೀಪದಲ್ಲಿಯೇ ಬಂದಿತ್ತು. ಅದರಿಂದ ಯಾರೂ ಕಲ್ಲಪ್ಪನ ಕಾಳಜಿ ಮಾಡಲಿಲ್ಲ. ಸರಸರ ಚಕ್ಕಡಿಗಳನ್ನು ಸಾಗಿಸಿಬಿಟ್ಟರು. ಈಗ ಅಡವಿಯಲ್ಲಿ ಕಲ್ಲಪ್ಪ ಒಬ್ಬನೇ ಸಾಗಿದ್ದ.

ಗುಡ್ಡದ ಓರೆಯಲ್ಲಿ ಈತನ ಚಕ್ಕಡಿಗೆ ದೊಡ್ಡದೊಂದು ಕಲ್ಲು ತಾಗಿತು. ತಡವಿಲ್ಲದೆ ಹಳಿ ಕಿತ್ತು ಹೋಯಿತು. ಚಕ್ಕಡಿ ಅಲ್ಲಿಯೇ ಮುರಿದು ಬಿತ್ತು. ಕಲ್ಲಪ್ಪ ಹೌಹಾರಿ ಕೆಳಗಿಳಿದ, ಹಳಿಯನ್ನು ತಂದು ಗಾಲಿಗೆ ಜೋಡಿಸತೊಡಗಿದ.

ಅಷ್ಟರಲ್ಲಿ ನಾಲ್ಕಾರು ಜನ ಕಳ್ಳರು ಬಂದರು. ಕಲ್ಲಪ್ಪನ ಮೈಯನ್ನು ಮೆತ್ತಗೆ ಮಾಡಿದರು. ಹತ್ತಿರವಿದ್ದ ಹಣವನ್ನೆಲ್ಲ ದೋಚಿಕೊಂಡು ಹೋದರು. ಆಗ ಕಲ್ಲಪ್ಪನಿಗೆ ಏನೆನಿಸಿರಬೇಕು ?

(ಮುಖ್ಯ ಮಾತುಗಳನ್ನು ನೋಡಿಕೊಂಡು ಈ ಕತೆಯ ಪೂರ್ವಾರ್ಧವನ್ನು ಬರೆಯಿರಿ, ಮತ್ತು ತಕ್ಕ ತಲೆಬರೆಹ ಕೊಡಿರಿ.)

ಈ ಮಾದರಿಗಳಲ್ಲಿ ಒಂದೆರಡು ಕತೆಗಳನ್ನು ಅಪೂರ್ಣವಾಗಿ ಕೊಟ್ಟಿದೆ. ಅವುಗಳ ಉತ್ತರಾರ್ಧ-ಪೂರ್ವಾರ್ಧಗಳನ್ನು ಬರೆಯುವ ಬಗೆಗೆ ಮುಖ್ಯ ಮಾತುಗಳಿವೆ. ಅವುಗಳಿಗೆ ತಕ್ಕಂತೆ ನೀವೇ ಉತ್ತರಾರ್ಧ ಪೂರ್ವಾರ್ಧಗಳನ್ನು ಜೋಡಿಸಿರಿ.

## — ಬಳಕೆ ಮತ್ತು ಕೇಳಿಕೆ —

೧. ಕೆಳಗಿನ ಮಾತುಗಳನ್ನು ಅಧಿಕರಿಸಿ, ಪ್ರತಿಯೊಂದಕ್ಕೆ ಕನಿಷ್ಠಪಕ್ಷ ಎರಡೆರಡು ಕತೆಗಳನ್ನು ಕಟ್ಟಿರಿ. ಕೊಟ್ಟ ವಾಕ್ಯಗಳು ಕತೆಗಳ ಕೊನೆಯಲ್ಲಿ ಬರುವಂತೆ ಯತ್ನಿಸಿರಿ.

ಐಕ್ಯದಲ್ಲಿಯೇ ಸೌಖ್ಯವಿದೆ. ಹಾರುವ ಮೊದಲೇ ಹವಣರಿತುಕೊಂಡಿದ್ದರೆ ಒಳಿತಾಗುತ್ತಿದ್ದಿತಲ್ಲವೇ ? ಜನವನ್ನು ಮೆಚ್ಚಿಸುವುದಕ್ಕಿಂತ ಮನಮೆಚ್ಚುವಂತೆ ನಡೆಯುವುದೇ ಹಿತಕರ. ಎಡರುಗಳಿಗೆ ಎದೆಗುಂದದಿದ್ದರೆ ಕಡೆಹಾಯುವ ಹಾದಿ ಕಣ್ಣೆದಿರಿಗೇ ಕಾಣುವುದು. ಅವನ ಕುಡುಕತನವೇ ಕೆಡುಕಿಗೆ ಕಾರಣವಾಯಿತಲ್ಲವೇ ?

೨. ಕೆಳಗಿನ ಮುಖ್ಯ ಮಾತುಗಳನ್ನು ಅಧರಿಸಿ ಕತೆಗಳನ್ನು ಹೆಣೆಯಿರಿ, ಮತ್ತು ಅವುಗಳಿಗೆ ತಕ್ಕ ತಲೆಬರೆಹಗಳನ್ನು ಕೊಡಿರಿ.

ಅರಸು ಹಗೆಗಳ ಪಟ್ಟಣವನ್ನು ಮುತ್ತಿದ- ತಮ್ಮನ್ನು ಎಲ್ಲಿಗಾದರೂ ಹೋಗಗೊಡಲು ನಾಗರಿಕ ಸ್ತ್ರೀಯರ ಬೇಡಿಕೆ- ಅರಸನ ಒಪ್ಪಿಗೆ, ಅತ್ಯಂತ ಅಮೌಲ್ಯ ವಸ್ತುವೊಂದನ್ನೇ ನಿಮ್ಮ ಸಂಗಡ ಒಯ್ಯಬೇಕೆಂದು ಅಪ್ಪಣೆ- ಮರುದಿನ ಬೆಳಗಿನಲ್ಲಿ ಸ್ತ್ರೀಯರ ಪ್ರಯಾಣ- ಎಲ್ಲರ ಬೆನ್ನ ಮೇಲೆಯೂ ಅವರವರ ಗಂಡಂದಿರು- ಅವರ ಪತಿಭಕ್ತಿಗೆ ಅರಸು ಮೆಚ್ಚಿದ- ಮುತ್ತಿಗೆಯನ್ನು ಕಿತ್ತ.

೩. ಕೊಟ್ಟ ವಿಚಾರಗಳಿಗೆ ತಕ್ಕಂತೆ ಕತೆಗಳನ್ನು ಹೇಗೆ ರಚಿಸಬೇಕು ?

೪. ಒಂದೇ ವಿಚಾರಕ್ಕೆ ಹೊಂದಿಸಿ ಹಲವು ಕತೆಗಳನ್ನು ಕಟ್ಟಬಹುದೋ ? ಹೇಗೆ ?

೫. ಕೊಟ್ಟ ಕತೆಗಳನ್ನು ಕಟ್ಟುವುದು ಹೇಗೆ ? ಆಗ ನೆನಪಿಡತಕ್ಕ ವಿಷಯಗಳಾವುವು ? ತಲೆಬರೆಹದ ಮಹತ್ತ್ವವೇನು ?

## ೪. ಸಂಭಾಷಣಗಳು (DIALOGUES)

### ಹಳ್ಳಿಯೋ–ಪಟ್ಟಣವೋ?

ಸನ್ನಿವೇಶ: ಚಂದ್ರಶೇಖರ ಪೇಟೆಯ ಬೀದಿಯಲ್ಲಿ ಹೊರಟಿದ್ದಾನೆ. ಇದಿರಿಗೆ ಆತನ ಿಯ ಬಸವರಾಜ ಬರುತ್ತಾನೆ. ಸಮಯ ೧೦ ಗಂಟೆ.

ಬಸವರಾಜ: ಏ, ನಿಲ್ಲು ಮಹಾರಾಯಾಽಽ? ಇಷ್ಟು ದಿವಸ ಯಾವ ಲೋಕದಲ್ಲಿ ತಗಿದ್ದೆ?

ಚಂದ್ರಶೇಖರ: ಯಾವ ಲೋಕದಲ್ಲಿ ಎಂದರೆ? ಇದೇ ಭೂಲೋಕದಲ್ಲಿ...............

ಬಸವ: ಹಾಗಾದರೆ, ಕಾಲೇಜಿನಲ್ಲಿ ಕಾಣಲೇ ಇಲ್ಲವಲ್ಲ.

ಚಂದ್ರ: ನಾನು ಕಾಲೇಜನ್ನು ಸೇರಲೇ ಇಲ್ಲ. ಎಂದಮೇಲೆ ಕಾಣಬೇಕು ಹೇಗೆ?

ಬಸವ: ಕೇಳಿದಂತೆಲ್ಲ ವಿಚಿತ್ರ. ಕಾಲೇಜನ್ನು ಸೇರಲಿಲ್ಲವೇಕೆ?

ಚಂದ್ರ: ತಂದೆಯವರಿಗೆ ಸ್ವಸ್ಥವಿಲ್ಲ. ನಮ್ಮ ಹಳ್ಳಿಯಲ್ಲಿ ಅಂಗಡಿಯ ವ್ಯವಹಾರ ಹಳ ಬೆಳೆದಿದೆ. ಅದನ್ನೆಲ್ಲ ನೋಡಿಕೊಂಡು ಹೋಗಲು ಬೇರೆ ಯಾರೂ ಇಲ್ಲ. ಎಂತೆಯೇ ಽನು ಕಾಲೇಜು ಬಿಡಬೇಕಾಯಿತು.

ಬಸವ: ಅಂತೂ ಕಾಲೇಜಿನ ಕಟ್ಟೆ ಹತ್ತಿದ್ದರೂ ಹಳ್ಳಿಯ ಹುಂಬನಾದೆಯಲ್ಲ ಕಡೆಗೆ! ಹಳ್ಳಿಯಲ್ಲಿ ಹೊತ್ತು ಹೇಗೆ ಹೋಗುವದಪ್ಪಾ ನಿನಗೆ?

ಚಂದ್ರ: ಹೊತ್ತು ಹೇಗೆ ಕಳೆಯಬೇಕೆಂಬ ವಿಚಾರವಿರಲಿ; ಅಲ್ಲಿರುವಾಗ ಹೊತ್ತು ೋದದ್ದೇ ಗೊತ್ತಾಗುವದಿಲ್ಲ ನನಗೆ. ಅಷ್ಟೊಂದು ದುಡಿತ.

ಬಸವ: ಪಾಪ, ಪಾಪ! ಹಳ್ಳಿಯ ಹುಂಬರ ಸಹವಾಸವೇ ಹಾಗೆ. ಒಂದೇ ಮಾತನ್ನು ತ್ತುಸಾರೆ ಹೇಳಬೇಕು. ಅವರ ಕೂಡ ತಲೆ ಒಡಕೊಳ್ಳುವದು ಬಲುಕಷ್ಟ.

ಚಂದ್ರ: ಅನುಭವವಿಲ್ಲದೆ ಆಡುತ್ತಿರುವಿ. ಅವರಿಗೆ ಪಟ್ಟಣಿಗರ ಮೋಸ ಮಾಟದ ಾತುಗಳು ಗೊತ್ತಿರುವದಿಲ್ಲ. ಹೃದಯದಿಂದ ನೇರವಾಗಿ ಮಾತಾಡತಕ್ಕವರವರು. ಆವ ಂತೆಯೇ ನಾವೂ ಹಸನಾದ ಹೃದಯದಿಂದ ಮಾತಾಡಿದರೆ ಜೀವಕ್ಕೆ ಜೀವ ಕೊಡುವ ಬಂಟ ವರು. ಅಂತಹರ ಸಹವಾಸವೆಂದರೆ ನನಗೆ ರಸನಿಮಿಷ.

ಬಸವ: ರಸವೋ ವಿರಸವೋ! ಆ ಕೊಳಚೆಯಲ್ಲಿ ಹೇಗೆ ಕಾಲಕಳೆಯುತ್ತಿರುವೆ?

ಚಂದ್ರ: ಕಣ್ಣು ಕುರುಡಾಗಿದ್ದವರು ಹೇಳಬೇಕು, ಹಳ್ಳಿಗಳನ್ನು ಕೊಳಚೆಯೆಂದು. ಕ್ಕಟ್ಟಾದ ಕೊಳಚೆ ಬೀದಿಗಳಿರುವುದು ಪಟ್ಟಣಗಳಲ್ಲಿ. ಇಲ್ಲಿಯ ಕೂಲಿಕಾರರ ವಸತಿಯನ್ನು ೋಡಬೇಕು; ನರಕವಾಸದ ಕಲ್ಪನೆ ಬರುತ್ತಿದೆ. ಹಳ್ಳಿಗಳಲ್ಲಿ ಎಂತಹ ಬಡವನೂ ಇಂತಹ ೊಳಚೆಯಲ್ಲಿರಲಾರ. ಬಿಡಿಬಿಡಿಯಾದ ಮನೆ, ಅಗಲಗಲವಾದ ಓಣಿಗಳಲ್ಲಿ ಶುದ್ಧ ಹವೆ

ತಾನೇತಾನಾಗಿರುತ್ತಿದೆ. ಅದಕ್ಕೆ ಬೇಕಾದರೆ ನನ್ನ ಪ್ರಕೃತಿಯನ್ನೇ ನೋಡು. ಈ ನಾಲು ತಿಂಗಳಲ್ಲಿ ಗಳ ಪೌಂಡು ತೂಕ ಹೆಚ್ಚಾಗಿದೆ.

ಬಸವ: ಚಿಂತೆಯಿಲ್ಲದೆ ತಿಂದರೆ ಹದಿನಾಲ್ಕು ಏಕೆ, ಮತ್ತೆ ಹತ್ತು ಪೌಂಡೂ ಹೆಚ್ಚಾದೀತು. ಆದರೆ ಜೋಕೆ, ಅಜೀರ್ಣವಾಗಿ ಅಸ್ವಸ್ಥನಾದೆಯೆಂದರೆ ಅಲ್ಲಿ ಡಾಕ್ಟರರೇ ಇಲ್ಲ.

ಚಂದ್ರ: ಹಳ್ಳಿಗಳಲ್ಲಿ ಡಾಕ್ಟರರ ಅವಶ್ಯಕತೆಯೇ ಇಲ್ಲ. ದಿನ ಬೆಳಗಾದರೆ ಎಲ್ಲರೂ ಬೈಲು ಹವೆಯಲ್ಲಿ ಮೈಮುರಿದು ದುಡಿಯುವವರೇ! ಅಂತಹರಿಗೆ ಬೇನೆಯಲ್ಲಿಂದ ಬರಬೇಕು? ಪಟ್ಟಣಿಗರು ಪ್ರಯತ್ನ ಪೂರ್ವಕವಾಗಿ ಬೈಲು ಹವೆಗೆ ಹೋಗಬೇಕು ಸಂಜೆ ಮುಂಜಾವಗಳಲ್ಲಿ. ಅದುಕೂಡ ತಾಸೆರಡು ತಾಸು; ಅಷ್ಟೆ. ಎಂದಮೇಲೆ, ನಿಮಗೆ ಮಾತ್ರ ಡಾಕ್ಟರರ ಅವಶ್ಯಕತೆ.

ಬಸವ: ಶರೀರವನ್ನು ಸೊಕ್ಕಿಸುವುದಕ್ಕೆ ಹಳ್ಳಿ ಅನುಕೂಲವಾಗಿರಬಹುದು. ಆದರೆ ಮನಸಿನ ಆನಂದಕ್ಕೇನುಪಾಯ? ನಮ್ಮಲ್ಲಿಯಂತೆ ಸಿನೇಮಾಗಳೇ, ನಾಟಕಗಳೇ, ತಮಾಷೆಗಳೇ, ಏನಿವೆ ಅಲ್ಲಿ?

ಚಂದ್ರ: ಸಿನೇಮಾ ನಾಟಕಗಳು ಪಟ್ಟಣಗಳಲ್ಲಿಯೇ ಏಕೆ ಎಂಬ ವಿಚಾರವೇ ನಿನಗೆ ಹೊಳೆದಿಲ್ಲ. ಬಿಂಕದ ಬಂಡವಲಗಾರರ ಕೈಯಲ್ಲಿ ಜೀವನವನ್ನು ಒತ್ತೆ ಇಟ್ಟು ದುಡಿದು ದಣಿದ ಜೀವಿಗಳ ಹೊಸ ಕೈಗಡದ ಹುರುಪಿಗಾಗಿ ನಾಟಕ, ಸಿನೇಮಾ. ಹಳ್ಳಿಯಲ್ಲಿ ದುರಂತದ ದುಡಿತವೇ ಇಲ್ಲ. ದಣಿದ ಜೀವ ನಿದ್ದೆಮಾಡಿ ಎದ್ದರೆ ಆನೆಯ ಕಸುವು ಮತ್ತೆ ಮೈಯಲ್ಲಿ.

ಬಸವ: ಅಲ್ಲೋ, ಸಿನೇಮಾ ನಾಟಕಗಳಲ್ಲಿ ನಿಸರ್ಗದ ಚಿತ್ರಸೌಂದರ್ಯವನ್ನು ನೋಡುವದರಿಂದ ಮನಸ್ಸು ಅರಳುವದಿಲ್ಲವೇ?

ಚಂದ್ರ: ಹುಚ್ಚು ನಿನಗೆ. ನಿನ್ನ ಚಿತ್ರದ ನಿಸರ್ಗ ಎಲ್ಲಿಯದು? ಹಳ್ಳಿಯ ಸುತ್ತಲಿನ ಹಚ್ಚಹಸಿರು ಮುರಿಯುವ ಹೊಲಗದ್ದೆಗಳು, ಮೈದಾನಗಳು, ನೆರೆಯಲ್ಲಿಯೇ ತುಂಬಿ ಹರಿಯುವ ಹಳ್ಳ-ಹೊಳೆ, ಸಮೀಪದಲ್ಲಿಯೇ ಗುಡ್ಡ, ಅದರ ಮರೆಯಲ್ಲಿ ಮುಳುಗುತ್ತಿರುವ ಕಿತ್ತಿಳೆಬಣ್ಣದ ಸೂರ್ಯ, ಹತ್ತಿರದ ಅಡವಿಯಲ್ಲಿ ಮುಗಿಲನ್ನು ಮುದ್ದಿಡುವ ಅಡವಿಗಳು ಇವೇ ಅಲ್ಲವೇ? ಅವುಗಳನ್ನೇ ನಾವು ನಿತ್ಯವೂ ನೋಡುತ್ತಿರುವಾಗ ಚಿತ್ರದ ನಿಸರ್ಗವೇಕೆ ಬೇಕು?

ಬಸವ: ಅಂತೂ ಹಳ್ಳಿಯ ಬಾಳು ನಿನಗೆ ತುಂಬಾ ಒಗ್ಗಿ ಹೋಗಿದೆ. ಎಂತೆಯೇ, ಪಟ್ಟಣಕ್ಕಿಂತ ಹಳ್ಳಿಯೇ ಒಳ್ಳೆಯದೆಂದು ಹೇಳುತ್ತಿರುವಿ.

ಚಂದ್ರ: ನಾನು ಹಾಗೆ ಹೇಳಲಿಲ್ಲವಲ್ಲ. ಈ ಜಗತ್ತಿನಲ್ಲಿ ಯಾವುದೂ ಪೂರಾ ಒಳ್ಳೆಯದಲ್ಲ, ಯಾವುದೂ ಪೂರಾ ಕೆಟ್ಟದ್ದಲ್ಲ. ನಿಸರ್ಗದ ನೆಮ್ಮದಿಯನ್ನು ನೋಡಬೇಕಾದರೆ ಹಳ್ಳಿಯೇ ಒಳ್ಳೆಯದಾಗಬಹುದು. ಆದರೆ ಪಟ್ಟಣದಲ್ಲಿರುವ ರೈಲು-ಮೋಟರು ಮುಂತಾದ ವಾಹನಗಳ ಅನುಕೂಲತೆ, ಅಂಚೆ-ತಂತಿಗಳ ಸೌಕರ್ಯ, ಶಿಕ್ಷಣ ಸಂಸ್ಥೆಗಳ ಸೌಲಭ್ಯ,

ನಿತ್ಯವೂ ಬರ--ಹೋಗುವ ಹೊಸ ಹೊಸ ಜನಗಳ ಸಂಪರ್ಕ ಇವೆಲ್ಲ ಹಳ್ಳಿಯವರಿಗೆ ಸಾಧ್ಯವೇ ಇಲ್ಲ. ಈ ದೃಷ್ಟಿಯಿಂದ, ಪಟ್ಟಣವೇ ನೆಟ್ಟಗೆನಿಸಬಹುದು.

ಬಸವ: ತರ್ಕದ ತಕ್ಕಡಿಯಲ್ಲಿ ಹಳ್ಳಿ—ಪಟ್ಟಣಗಳನ್ನು ಸರಿಯಾಗಿ ತೂಗಿದೆಯಲ್ಲ. ನಿನ್ನಂತಹ ಮಹಾನುಭಾವ ಸಿಕ್ಕುದು ಹಳ್ಳಿಯವರ ಸುದೈವವೆಂದೇ ಹೇಳಬೇಕು. ಮಹಾತ್ಮಾಜಿಯವರ Back to villages ಎಂಬ ಮಾತು ನಿನ್ನ ನಡೆಯಲ್ಲಿ ತಾನಾಗಿಯೇ ಬಂದಿದೆ. ಹಳ್ಳಿಗರಿಗೆ ಯಾವ ಯಾವ ಮುನ್ನಡೆಯ ಮಾರ್ಗಗಳನ್ನು ಮಾಡಿರುವೆ?

ಚಂದ್ರು: ಅದನ್ನು ನೀನೇ ಅಲ್ಲಿಗೆ ಬಂದು ನೋಡಿ ಹೇಳಬೇಕು. ಇದೇ ಆಮಂತ್ರಣ. ಮುಂದಿನ ಭಾನುವಾರ ನೀನು ನಮ್ಮಲ್ಲಿಗೆ ಬರಲೇಬೇಕು.

ಬಸವ: ಆಗಬಹುದು.

ಚಂದ್ರು: ಹಾಗಾದರೆ, ನಾನಿನ್ನು ಹೊರಡಲೇ? ಸರಕನ್ನು ಕೊಳ್ಳಬೇಕಾಗಿದೆ.

---

## ದೈವವೋ – ಪ್ರಯತ್ನವೋ ?

ಸನ್ನಿವೇಶ: ರಾಜು, ಚಿನ್ನ ಓರಗೆಯ ಗೆಳೆಯರು. ೧೦ನೆಯ ತರಗತಿಯಲ್ಲಿ ಓದುತ್ತಿದ್ದವರು. ಇಬ್ಬರೂ ಬುದ್ಧಿವಂತರು. ಆದರೆ ಪರೀಕ್ಷೆಯಲ್ಲಿ ರಾಜೂ ಮೊದಲಿಗನಾಗಿ ಪಾಸಾಗಿದ್ದಾನೆ. ಚಿನ್ನನ ಪರೀಕ್ಷೆ ಇಳಿದಿಲ್ಲ. ಅಂದು ಪಾರಿತೋಷಕ ಸಮಾರಂಭದ ದಿನ. ನಾಲ್ಕು ಗಂಟೆಯ ಸಮಯದಲ್ಲಿ ಗೆಳೆಯರಿಬ್ಬರೂ ರಾಜುವಿನ ಕೋಣೆಯಲ್ಲಿ ಕುಳಿತಿದ್ದಾರೆ. ಗಡಿಯಾರ ಢನ್ ಢನ್ ನಾಲ್ಕು ಬಾರಿಸುತ್ತಿದೆ.

ರಾಜು: (ಗಡಿಯಾರದ ಗಂಟೆಗಳನ್ನು ಎಣಿಸುತ್ತ) ಒಂದು, ಎರಡು, ಮೂರು, ನಾಲ್ಕುಽಽ! ನಡೆ ಚಿನ್ನಾ ಹೊತ್ತಾಗತದೆ. ಸಭಾಕ್ಕೆ ಹೋಗೋಣ.

ಚಿನ್ನ: ಸಭಾಽಽ! ಇವತ್ತೆಲ್ಲೀ ಸಭಾನೋಽಽ?

ರಾಜು: ಹೌದಲ್ಲಽಽಽ! ಇತ್ತೀಚಿಗೆ ನೀ ಸಾಲೆಗೆ ಬಂದೇ ಇಲ್ಲ. ಈಹೊತ್ತು ಪಾರಿತೋಷಕ ಸಮಾರಂಭ ಅದೆ.

ಚಿನ್ನ: ಇನಾಮು ಕೊಡೋದೇ? ಯಾರು ಯಾರಿಗೆ ಕೊಡತಾರೆ?

ರಾಜು: ಊರೊಳಗ ಕೆಲವು ಸದ್ಗೃಹಸ್ಥರು ನಮ್ಮ ಶಾಲೆಯೊಳಗೆ ಕೆಲವು ಬಹುಮಾನ ಇಟ್ಟಿದ್ದರಲ್ಲ, ಮೇಲೆ ನಂಬರ ಬಂದ ಹುಡುಗರಿಗೆ ಕೊಡಲಿಕ್ಕೆ ಅಂತ. ಅವುಗಳನ್ನು ಹಂಚತಾರೆ ಈ ಹೊತ್ತು ಸಭಾ ಕೂಡಿಸಿ.

ಚಿನ್ನ: ಅದಕ್ಕಽಽ ಏನು ಇಷ್ಟು ಗಡಿಬಿಡಿ? ಅಂತೂ ಹೊಡೆದೆಲ್ಲ ಒಮ್ಮೆಲೆ ಎರಡು ಇನಾಮು, ಒಂದನೇ ನಂಬರ ಬಂದು! ಸುದೈವಿಯಪಾ ನೀನು!

ರಾಜು: ಚಿನ್ನನ ಪಾಲು ನನಗ ಬಂದದಕ್ಕೆ ಸುದೈವಿ ಅಂತ ಒಪ್ಪಿಕೊಳ್ಳಲೇಬೇಕಾಗತದ. ಪ್ರತಿವರ್ಷ ನಿನಗೇ ಅಲ್ಲೇನು ಆ ಸಂಭಾವನೆಗಳೆಲ್ಲ ಮೀಸಲಾಗಿರತಿದ್ದದ್ದು?

ಚಿನ್ನ: ಹೌದು. ಈ ವರ್ಷ–ಕೆಟ್ಟ ಹಣೆಬರಹ–ಸಂಭಾವನೆ ಹಾಗಿರಲಿ, ಪರೀಕ್ಷಾ ಕೂಡ ಪಾಸಾಗಲಿಲ್ಲ. ದುರ್ದೈವ....

ರಾಜು: ದೈವಽ ಯಾಕ ದೂರಿಕೊಳ್ಳುತ್ತೀ? ಪ್ರಯತ್ನ ಮಾಡದೇ ಇದ್ದದ್ದಕ್ಕ ನಾಪಾಸ ಆಯ್ತು ಅಂತ ಹೇಳ್ಳಿಕ್ಕೆ ಒಲ್ಲೇನು? ಅಲ್ಲೋ, ನಾ ನಿನಗಿಂತ ಎಷ್ಟು ಹಿಂದೆ ಇರತಿದ್ದೆ, ಗೊತ್ತದೆ ಇಲ್ಲೋ? ನಿನ್ನ ಕೂಡ ಪ್ರಯತ್ನ ಮಾಡಿ ಮಾಡಿ ಈ ತರಗತಿಗೆ ಮುಟ್ಟಿದೆ. ನೀ ನಿನ್ನ ಪ್ರಯತ್ನ ಬಿಟ್ಟರೆ ದೈವ ಏನು ಮಾಡೀತು?

ಚಿನ್ನ: ಹಾಗಾದರೆ ದೈವ ಅನ್ನೋದೇ ಇಲ್ಲ, ಅಂತಿಯೇನುಽಽ?

ರಾಜು: ಇದ್ದರ ಇದ್ದಕೋವಲ್ಲದ್ಯಾಕ; ಅದಕ್ಕೂ ನಿನ್ನ ನಾಪಾಸಿಗೂ ಸಂಬಂಧ ಏನು? ಅದು ಬಂದು ನಿನಗೆ ಅಭ್ಯಾಸ ಮಾಡಬ್ಯಾಡಾ ಅಂತ ಹೇಳಿತೇನು?

ಚಿನ್ನ: ಹಾಗಲ್ಲೋ, ವಿಧಿ ಬೆನ್ನು ಹತ್ತಿತೂ ಅಂದರ ಕೆಲಸ ಮಾಡಬಾರದು ಅನ್ನೋ ಮನಸ್ಸು ತಾನಾಗೇ ಹುಟ್ಟತದೆ.

ರಾಜು: ಸುಮ್ಮಸುಮ್ಮನೆ ವಿಧಿ ಯಾಕ ಬೆನ್ನು ಹತ್ತತದೆ! ಅದಕ್ಕ ನಮ್ಮ ಮೇಲೇನು ಸಿಟ್ಟು? ಅಲ್ಲಪಾ, ದೇವರು ಲೋಕಕ್ಕೆಲ್ಲ ದೊಡ್ಡವ ಅನ್ನೋದು ಕೇಳಿಯೋ ಇಲ್ಲೋ? ಅಂಥ ದೊಡ್ಡಽಽವಽ ನಮ್ಮಂಥ ಕ್ಷುದ್ರ ಮನುಷ್ಯರ ಕೆಲಸದೊಳಗೆ ಅಡ್ಡಗಾಲು ಹೊಡೀಲಿಕ್ಕೆ ಬರತಾನೇ? ಯಾರು ಹೇಳಿದರು ನಿನಗ ಈ ದೈವದ ಹುಚ್ಚು! ವರ್ತಮಾನ ಪತ್ರದೊಳಗ ವಾರದ ಭವಿಷ್ಯ ಓದತೀ ಅಂತ ಕಾಣತದ! ಅಲ್ಲಽಽಽ?

ಚಿನ್ನ: ಅಂತೂ ನಾ ನಾಪಾಸಾದದ್ದು ಪೂರಾ ನನ್ನ ತಪ್ಪಽಽ ಅಂತೀಯಾ?

ರಾಜು: ನಾ ಹೇಳಿದರ ನಿನಗ ಕೆಡಕ ಅನಿಸೀತು. ಈ ವರ್ಷ ನೀ ಹ್ಯಾಂಗ ಅಭ್ಯಾಸ ಮಾಡೀದೀ ಅನ್ನೋದನ್ನ ನೀನೇ ಹೇಳಲ್ಲ.

ಚಿನ್ನ: ಕಾದಂಬರೀ ನಾಟಕ ಓದಿದ್ದು ತಪ್ಪು ಅಂತೀಯೇನು? ಮತ್ತೆ ಜನರಲ್ ಬುಕ್ಸ ಓದಿರಿ ಅಂತ ಗುರುಗಳು ಹೇಳತಿದ್ದಿಲ್ಲೇನು?

ರಾಜು: ಹೇಳತಿದ್ದರು; ಆದರೆ ಸಾಲೆ ಪುಸ್ತಕ ಕಟ್ಟಿ ಇಟ್ಟು ಬರೇ ಜನರಲ್ ಬುಕ್ಸನೇ ಓದಿರಿ ಅಂತ ಹೇಳಲಿಲ್ಲ. ಸಾಲೆಯ ಅಭ್ಯಾಸ ಮುಗಿಸಿಗೋಬೇಕು; ಉಳಿದ ವ್ಯಾಳ್ಯಾ ದೊಳಗ ಅಂಥ ಮನೋರಂಜನ ವಿಷಯ ಓದಬೇಕು. ಪರೀಕ್ಷಾದೊಳಗ ಯಾವ ಪುಸ್ತಕ ದೊಳಗಿನ ಪ್ರಶ್ನ ಕೇಳತಾರೆ ಅನ್ನೋದು ನಿನಗೆ ಗೊತ್ತಿಲ್ಲೇನು?

ಚಿನ್ನ: ದುರ್ದೈವ ಬೆನ್ನು ಹತ್ತಿತು ಅಂದರೆ ಇಂಥ ಅಡ್ಡ ಹಾದೀ ಹಿಡಿಸಿ ಬಿಡತದೆ.

ರಾಜು: ಮತ್ತೆ ತಂದೆಯಲ್ಲ ದೈವ–ದುರ್ದೈವ ಅಂತ! ಅಲ್ಲಪಾ, ಪರೀಕ್ಷಾ ಎರಡು ತಿಂಗಳ ಇರತಾ ನಾ ನಿನಗ ಎಚ್ಚರಿಕೆ ಕೊಡಲಿಲ್ಲೇ, ಇನ್ನರೆ ಕೂಡಿ ಅಭ್ಯಾಸ ಮಾಡೋಣ ಅಂತ. ನಿನಗ ಭೂಗೋಲ ಮತ್ತು ಗಣಿತ ವಿಷಯ ತುಂಬಾ ತೊಂದರೆ ಕೊಡತವೆ

ಅನ್ನೋದು ಗೊತ್ತಿಲ್ಲೇನು ? ಪ್ರಯತ್ನ ಮಾಡದೆ ಬರೋ ವಿಷಯಗಳೇನು ಅವು ? ಆಗ, ಈಗ ಅಂತ ಸುಮ್ಮನೆ ಕಾಲಾ ತಳ್ಳಿದಿ; ಬರೀ ಕತೆ ಕಾದಂಬರೀನೇ ಓದಿದಿ !

ಚಿನ್ನ: ಪರೀಕ್ಷಾ ಎಂಟು ಹತ್ತು ದಿವಸ ಇರತಾ ಭೂಗೋಲ, ಗಣಿತಕ್ಕೇ ಗಂಟು ಬೀಳಲಿಲ್ಲೇನು ?

ರಾಜು: ನೀನು ಬುದ್ಧಿವಂತ ಅನ್ನೋದನ್ನ ಒಪ್ಪತೇನಿ. ಆದರೆ ಎಂಟು ಹತ್ತು ದಿವಸಕ್ಕೇ ಪರೀಕ್ಷಾ ಪಾಸಾಗೋ ಹಾಗಿದ್ದರೆ ವರ್ಷಕ್ಕೊಂದು ಪರೀಕ್ಷಾ ಅಂತ ಯಾಕ ಗೊತ್ತು ಮಾಡತಿದ್ದರು ? ನಮ್ಮಂಥ ದಡ್ಡರು ವರ್ಷಾನುಗಟ್ಟಲೆ ಓದಿದರೆ, ನಿಮ್ಮಂಥ ಬುದ್ಧಿವಂತರು ಆರು ತಿಂಗಳಾದರೂ ಪ್ರಯತ್ನ ಮಾಡಬಾರದೇನು ? ಹಿಡಿದ ಹಾದಿ ತಪ್ಪು ಆಗಿರೋವಾಗ ಗುರಿ ಮುಟ್ಟಲಿಲ್ಲ ಅಂತ ದೈವವನ್ನು ಹಳೀತೀಯಲ್ಲ ?

ಚಿನ್ನ: ರಾಜೂ, ರಾಜೂ ನೀನು ನನ್ನ ಗೆಳೆಯನಲ್ಲ; ಗುರು. ನನ್ನ ಪಾಲಿನ ಪರಮೇಶ್ವರ ! ನನ್ನ ತಪ್ಪನ್ನು ನನಗೆ ತಿಳಿಸಿ ಮಹದುಪಕಾರ ಮಾಡಿದಿ. ಇನ್ನು ಆ ಹೇಡಿ ದೈವವಾದವನ್ನು ಬಿಡುವೆ, ಪ್ರಯತ್ನವಾದದಲ್ಲಿಯೇ ಫಲವನ್ನು ಕಂಡುಕೊಳ್ಳುವೆ.

ರಾಜು: ಆವೇಶದಲ್ಲಿ ಅಂತ್ಯವಾಗತಕ್ಕ ವಿಷಯವಲ್ಲ ಇದು. ನೀನು ಈ ವರ್ಷ ನಾಪಾಸಾದುದು ನಿನ್ನ ಕಲ್ಯಾಣಕ್ಕೇ ಎಂದು ತಿಳಿ. ಇನ್ನು ನೀನು ಪ್ರಯತ್ನವಾದಿಯಾದಿ ಅಂದರ ಮುಂದಿನ ಪರೀಕ್ಷೆಗಳೊಳಗೆಲ್ಲ ಒಂದನೇ ನಂಬರ ನಿನ್ನದೇ. ನಮ್ಮಂತಹರೆಲ್ಲ ನಿನ್ನ ಪಾಸಂಗಕ್ಕೆ ಹತ್ತೋದಿಲ್ಲ. ( ಗಡಿಯಾರದಲ್ಲಿ ಢಣ್ ಎಂದು ಗಂಟೆ ಹೊಡೆಯುವುದು. ) ಆದೋ ನಿನ್ನ ಪ್ರತಿಜ್ಞೆಗೆ ಸಮ್ಮತಿಸೂಚಕ ಘಂಟಾನಾದ. ನಾಲ್ಕುವರೆ ಗಂಟೆಯಾಯಿತು. ಸಭಾ ಸೇರೋದಕ್ಕ ಇನ್ನೂ ಅರ್ಧ ತಾಸು ಉಳಿಯಿತು. ನಡೆ ಅತ್ತಲೇ ಹೊರಡೋಣ.

**ವಿಚಾರ:** ಸಂಭಾಷಣವನ್ನು ಬರೆಯುವದು ಯಾರಿಗೂ ಹಗುರಾಗಿ ತೋರತಕ್ಕ ವಿಷಯ. ನಿಜವಾಗಿ ನೋಡಿದರೆ ಸಾಹಿತ್ಯದಲ್ಲಿ ಇಂತಹ ಗಡುಚಾದ ವಿಷಯ ಮತ್ತೊಂದಿಲ್ಲ. ' ನಾಟಕಾಂತಂ ಸಾಹಿತ್ಯಂ ' ಎಂಬ ಮಾತೇ ಇದಕ್ಕೆ ಸಾಕ್ಷ್ಯ. ನಾಟಕಗಳಿಗೆ ಸಂಭಾಷಣಗಳೇ ಭದ್ರಭೂಮಿಕೆಗಳಲ್ಲ ? ಆದುದರಿಂದ ವಿದ್ಯಾರ್ಥಿಗಳು ಹೆಚ್ಚು ಪ್ರಯತ್ನದಿಂದ ಈ ಅಭ್ಯಾಸವನ್ನು ಅಳವಡಿಸಿಕೊಳ್ಳಬಹುದು. ಈ ಹಿಂದೆ ಎರಡು ಬಗೆಯ ಸಂಭಾಷಣಗಳಿವೆ. ಒಂದು ವ್ಯಾಕರಣದ ಭಾಷೆಗೆ ಒಳಪಟ್ಟಿದೆ; ಉಳಿದುದು ಮೇಲ್ತರಗತಿಯವರು ಮಾತಾಡುವ ಭಾಷೆಯಲ್ಲಿವೆ. ಈ ಸಂಭಾಷಣೆಯಲ್ಲಿ ಚರ್ಚಾತ್ಮಕ ವಿಷಯಗಳಿವೆ. ಇಂತಹವುಗಳನ್ನು ಬರೆಯುವುದು ತುಸು ಕಷ್ಟಸಾಧ್ಯ. ಏಕೆಂದರೆ ಯಾವುದೊಂದು ವಿಷಯದ ಬಗೆಗೆ ಸಾಧಕ ಬಾಧಕ ಎರಡೂ ಬಗೆಯ ಜ್ಞಾನ ಬೇಕಾಗುತ್ತಿದೆ. ಅದನ್ನೇ ಮಾತುಗಾರಿಕೆಯಲ್ಲಿ ತುಂಬ ಬೇಕಾಗುತ್ತಿದೆ. ಅದಕ್ಕಾಗಿ ಮಾದರಿಯ ಬರೆಹಗಳನ್ನು ಚೆನ್ನಾಗಿ ತಿಳಿದುಕೊಳ್ಳಿರಿ.

## — ಬಳಕೆ ಮತ್ತು ಕೇಳಿಕೆ —

೧. ಕೆಳಗಿನ ಸಂವಾದವನ್ನು ಪೂರ್ತಿಮಾಡಿರಿ.

ಸನ್ನಿವೇಶ— ರಾಮನ ಅತ್ತೆಯ ಮಗ ಗೋವಿಂದ ಹಳ್ಳಿಯಿಂದ ಬಂದಿದ್ದಾನೆ. ಚಹಾದ ಅಂಗಡಿಗೆ ಹೋಗಲು ರಾಮ ಕರೆಯುತ್ತಾನೆ. ಗೋವಿಂದನಿಗೆ ಚಹಾದ ಚಟವಿಲ್ಲ. ಅವರಿಬ್ಬರ ನಡುವೆ ಮಾತುಕತೆ. ಸಮಯ: ಬೆಳಗು.

ರಾಮ: ಏ, ಗೋವಿಂದಾ, ಲಗು ಏಳೋ ! ಹೊತ್ತಾಗೋದಿಲ್ಲೇನು ?

ಗೋವಿಂದ: ಎಲ್ಲಿಗೆ ಹೋಗೋಣಂತೀ ?

ರಾಮ: ಎಲ್ಲಿಗೆ ಅಂದರೆ ? ಚಾದಂಗಡೀಗೆss ! ಬ್ಯಾಡೇನು ನಿನಗೆ ಚಾ ?

ಗೋವಿಂದ: ನಮಗೆಲ್ಲೀದೋ ಚಾss................

(ಈ ಮಾತುಕತೆಗಳನ್ನು ಮುಂದುವರಿಸಿ ಮುಗಿಸಿರಿ. ತಲೆಬರೆಹ ಕೊಡಿರಿ.)

೨. ಸನ್ನಿವೇಶ— ರಂಗಣ್ಣ ಗುರುಗಳು ಪರೀಕ್ಷಾ ಪ್ರಶ್ನಪತ್ರಿಕೆಯನ್ನು ತೆಗೆಯುತ್ತ ಕುಳಿತಿದ್ದಾರೆ. ನೆರಮನೆಯ ವಾಸುದೇವರಾಯ ಅಲ್ಲಿಗೆ ಬರುತ್ತಾನೆ. ಪರೀಕ್ಷೆಗಳು ಅವಶ್ಯವೋ, ಅನಾವಶ್ಯವೋ ಎಂಬ ಬಗೆಗೆ ಅವರಿವರಲ್ಲಿ ಚರ್ಚೆ.

ವಾಸುದೇವ: ಇದ್ದೀರಾ ಗುರೂಜೀss. ಏನ ನಡದsದ ?

ರಂಗಣ್ಣ: ಬನ್ನಿರಿss ! ಕೂತುಕೊಳ್ಳಿರಿ. ಇದಿಷ್ಟು ಪ್ರಶ್ನಪತ್ರಿಕೆ ಮುಗಿಸಿ ಬರತೇನಿ. ಮುಂದಿನ ಸೋಮವಾರದಿಂದ ಪರೀಕ್ಷಾ ಸುರು ಅದ.

ವಾಸುದೇವ: ತಕ್ಕೊಂಡ ಸಂಬಳ ದಕ್ಕಿಸಿಕೊಳ್ಳಬೇಕೂಂತ ನಡಸೀರಿ ಹಾದಲ್ಲೋ ಪರೀಕ್ಷಾದ ಫಾರ್ಸ್sss.

(ಉಳಿದುದನ್ನು ಬರೆದು ಮುಗಿಸಿರಿ. ತಲೆಬರಹವನ್ನು ಕೊಡಿರಿ.)

೩. ಗ್ರಾಮೊಫೋನ ಮತ್ತು ರೇಡಿಯೋ ಯಂತ್ರಗಳ ನಡುವೆ ತಮ್ಮ ತಮ್ಮ ಹಿರಿಮೆಯನ್ನು ಹೊಗಳಿಕೊಳ್ಳುವ ಕಾಲ್ಪನಿಕ ಸಂಭಾಷಣವನ್ನು ಬರೆಯಿರಿ.

೪. ಒಬ್ಬ ಡಾಕ್ಟರ ಮತ್ತು ವಕೀಲ ಇವರಿಬ್ಬರ ನಡುವೆ ನಡೆಯಬಹುದಾದ ಸಂಭಾಷಣೆ— ಸಮಾಜಕ್ಕೆ ಯಾರ ಉಪಯೋಗ ಹೆಚ್ಚು ಎಂಬ ಬಗೆಗೆ........

೫. ಚಳಿಗಾಲ ಮತ್ತು ಮಳೆಗಾಲ— ಯಾರು ಹೆಚ್ಚು ಎಂದು ವಾದ.

೬. ಓದು–ಆಟಗಳಲ್ಲಿ ಜೀವನಕ್ಕೆ ಯಾವುದು ಅತ್ಯವಶ್ಯ ? ಇಬ್ಬರು ಗೆಳೆಯರಲ್ಲಿ ಚರ್ಚೆ.

೭. ಸಾಯನ್ಸ ಮತ್ತು ಆರ್ಟ್ಸ ಇವುಗಳಲ್ಲಿ ಯಾವುದು ಶ್ರೇಷ್ಠ ? ಇಬ್ಬರು ಕಾಲೇಜ ವಿದ್ಯಾರ್ಥಿಗಳಲ್ಲಿ ಚರ್ಚೆ.

೮. ಸಂಭಾಷಣೆಗಳನ್ನು ಬರೆಯುವ ಬಗೆಗೆ ನೆನಪಿಡುವ ಮಾತುಗಳಾವುವು ?

— —






## ರಸಾಸ್ವಾದನ ಮತ್ತು ಸರಳಾನುವಾದ

……………ಧರ್ಮಜ ಜನ ಧರೆ ಪೊಗಳು ।
ತಿರೆ ಬಳಿಕ ಹಸ್ತಿನಾವತಿಗೆ ವೇದವ್ಯಾಸನೊಂದು ದಿವಸಂ ಬಂದನು ॥
ಬರಲಾ ನೃಪಾಲಕಂ ಸೋದರರ್ವೆರಸಿ ಮುನಿ ।
ವರನ ಪದಕೆರಗಿದೊಡೆ ಮಣಿದೆತ್ತಿ ಬೋಳೈಸಿ ।
ಪರಸಿ ಮಂತ್ರಾಕ್ಷತೆಯನಿತ್ತು ಸತ್ಕಾರಮಂ ಕೊಂಡು ಕುಳ್ಳಿರ್ದ ಬಳಿಕ ॥
ಅರಸನನುತಾಪದಿಂ ತಲೆವಾಗಿ ಮಾತಾಡ ।
ದಿರುತಿರ್ದನನಿಲ ಸಂಚಾರವೊಂದಿನಿತಿಲ್ಲ ।
ದುರಿವ ಕಡುವೇಸಗೆಯ ಬಿಸಿಲಿಂದೆ ಬಸವಳಿದ ಕೋಮಲ ರಸಾಲದಂತೆ ॥
ಕಂಡನರಸನ ಭಾವಮಂ ಬಳಿಕ ನಗುತೆ ಬೆಸ ।
ಗೊಂಡನಿಂತೆಂದಾ ಮುನೀಂದ್ರ ನೆಲೆ ನೃಪತಿ ಭೂ ।
ಮಂಡಲದ ಸಕಲ ಸಾಮ್ರಾಜ್ಯಮಂ ಪಾಲಿಸುವ ನಿನ್ನ ಸಂತಸದೇಳ್ಗೆಗೆ ॥
ಖಂಡನಂ ಮಾಳ್ಪುದಾನನದಿರವು ಸಾಕು ಮನ ।
ದಂಡಲೆಯನೊರೆಯುನಲ್ಲಿೀಯ ಸಂತಾಪದಿಂ ।
ಬೆಂಡಾದುದೆನ್ನೊಡಲ್ ಸೈರಿಸೆನೆಂದೊಡಾ ತಪೋನಿಧಿ ನುಡಿದನು ॥
ಕೆತ್ತ ಬಲ್ಗತ್ತಲೆಗೆ ತರಣಿ ಮುಂಗಾಣದಿರೆ ।
ಪೊತ್ತುವೆಳಗಂ ಬೇರೆ ತೋರ್ಪರಾರ್, ಬಿಡದೆ ಘ ।
ರ್ಮೋತ್ತರಕೆ ಮಾರುತಂ ಬೆಮರ್ದೊಡಾರ್ಬೀಸುವರ್ ಬಳಿಕಾಲವಟ್ಟದಿಂದೆ ॥
ಕೃತ್ರಿಮದ ವಿಷದ ಸೋಂಕಿಗೆ ಗರುಡನಳವಳಿಯೆ ।
ಮತ್ತೆ ರಕ್ಷೆಗೆ ಮಂತ್ರಿಸುವರಾರು, ಭೂಪ ನೀ ।
ನೊತ್ತವನುತಾಪಕೆಡೆಗೊಟ್ಟೊಡಾರ್ಬಿಡಿಸುವರ್ ಪೇಳೆಂದನಾ ಮುನಿಪನು ॥

ಈ ಪದ್ಯಗಳನ್ನು ಸರಿಯಾಗಿ ಓದಿಕೊಂಡು ಕೆಳಗಿನ ಪ್ರಶ್ನೆಗಳಿಗೆ ಉತ್ತರಕೊಡಿರಿ.

೧. ಕೆತ್ತಬಲ್ಗತ್ತಲೆಗೆ…………… ಈ ಪದ್ಯದ ಸರಳಾನುವಾದವನ್ನು ಬರೆಯಿರಿ.
೨. ಈ ಪದ್ಯಗಳ ಭಾವಕ್ಕೆ ತಕ್ಕಂತೆ ಸಣ್ಣ ಸಂಭಾಷಣವನ್ನು ರಚಿಸಿರಿ.
೩. 'ಅರಸನನುತಾಪದಿಂ'ದಿದ್ದುದನ್ನು ಕವಿ ಹೇಗೆ ಬಣ್ಣಿಸಿದ್ದಾನೆ ?
೪. ಅರಸನ ಅನುತಾಪವನ್ನು ಕಂಡು ವೇದವ್ಯಾಸರು ನಗುತೆ ಮಾತನಾಡಿದುದೇಕೆ?
೫. ವ್ಯಾಸ ಮಹರ್ಷಿಗಳ ಪ್ರಶ್ನೆಗೆ ಧರ್ಮರಾಜ ಕೊಟ್ಟ ಉತ್ತರವಾವುದು ?
೬. ವ್ಯಾಸಮುನಿಗಳು ಧರ್ಮರಾಜನ ದೊಡ್ಡಿತೆಯನ್ನು ಹೇಗೆ ಹೇಗೆ ಹೇಳುತ್ತಾರೆ ?
೭. ಈ ಕಾವ್ಯಪ್ರಸಂಗಕ್ಕೆ ತಕ್ಕ ತಲೆಬರೆಹವಾವುದು ?
೮. ಈ ಮೂರು ಪದ್ಯಗಳಲ್ಲಿ ನಿಮ್ಮ ಮನಸ್ಸನ್ನು ರಂಜಿಸುವ ಪದ್ಯವಾವುದು ? ಏಕೆ ?

೯. ಈ ಕವಿತೆಗಳ ಭಾವ ಬಂಧ ಹೇಗಿವೆ ? ಚರ್ಚಿಸಿರಿ.

೧೦. ಈ ಪದ್ಯದಲ್ಲಿ ಕವಿಯ ಪ್ರತಿಭೆ ಎಲ್ಲಿ ತೋರುತ್ತಿದೆ ?

## ಉತ್ತರಗಳು

೧. ಒತ್ತಿಬಂದ ಕತ್ತಲೆಗೆ ಸೂರ್ಯನೇ ಮಂಕಾಗಿ ಬಿಟ್ಟರೆ ಮತ್ತೆ ಆತನಿಗೆ ಸೂರ್ಯಪ್ರಕಾಶ ವನ್ನು ಯಾರು ತೋರಿಸಬೇಕು ? ಬೇಸಗೆಯ ಬಿಸಿಲಿನಿಂದ ವಾಯುದೇವನಿಗೆ ಬೆಮರು ಬಂದರೆ ಅದನ್ನು ಕಳೆಯಲು ಬೀಸಣಿಕೆಯಿಂದ ಬೀಸುವವರು ಯಾರು ? ಸುಳ್ಳು ಸುಳ್ಳೇ ವಿಷದ ಸಂಪರ್ಕವಾಯಿತೆಂದು ಗರುಡನೇ ತತ್ತರಿಸಿದರೆ ಅವನನ್ನು ಬದುಕಿಸುವುದಕ್ಕೆ ಮಂತ್ರ ಗಳನ್ನು ಯಾರು ಹೇಳಬೇಕು ? ಇದರಂತೆ, ಸಕಲರನ್ನು ಪಾಲಿಸುವ ನೀನೇ ದುಃಖಕ್ಕೆ ಒಳಗಾದರೆ ನಿನ್ನ ದುಃಖವನ್ನು ಯಾರು ಬಿಡಿಸಬೇಕು ? ಎಂದು ಮುನಿ ಕೇಳಿದನು.

೨. ಸನ್ನಿವೇಶ–ಧರ್ಮರಾಜ ಒಳ್ಳೆ ರೀತಿಯಿಂದ ಹಸ್ತಿನಾವತಿಯನ್ನು ಆಳುತ್ತಿರುವಾಗ ಒಂದು ದಿವಸ ಅಲ್ಲಿಗೆ ವೇದವ್ಯಾಸರು ಬರುತ್ತಾರೆ. ಅವರನ್ನು ಪಾಂಡವರು ಸತ್ಕರಿಸುತ್ತಾರೆ.

ಧರ್ಮರಾಜ: ಪೂಜ್ಯರು ದಯಮಾಡಿಸಬೇಕು. ಬಂಧುಗಳೆಲ್ಲರೂ ನಮಸ್ಕರಿಸುವೆವು.

ವ್ಯಾಸರು: ಕಲ್ಯಾಣವಾಗಲಿ, ಏಳಿರಿ; ಈ ಮಂತ್ರಾಕ್ಷತೆಗಳನ್ನು ಹಿಡಿಯಿರಿ. (ಎಲ್ಲರೂ ಕೈಕೊಳ್ಳುವರು.) ಧರ್ಮರಾಜಾ, ಮಾತನಾಡದೆ ಮೌನವಾಗಿ ನಿಂತಿರುವೆಯೇಕೆ ? ಬೆಟ್ಟಬೇಸ ಗೆಯ ಬಿಸಿಲಿಂದೆ ಬಳಲಿದ ರಸಾಲದಂತೆ ನಿನ್ನ ದೇಹ ಅನುತಾಪಕ್ಕೆ ಈಡಾದಂತೆ ತೋರುತ್ತಿದೆ. ಕಾರಣವೇನು ?

ಧರ್ಮರಾಜ: (ಮಾತಿಲ್ಲದೆ ನಿಟ್ಟುಸಿರು ಬಿಡುವ.)

ವ್ಯಾಸರು: ಅಯ್ಯೋ ಹುಚ್ಚಪ್ಪಾ, ನಿಟ್ಟುಸಿರು ಬಿಡುವೆಯೇಕೆ ? ಸಕಲಸಾಮ್ರಾಜ್ಯ ವನ್ನು ಆಳುವ ನೀನು ಸಂತೋಷವನ್ನು ಸೂಚಿಸುವ ಬದಲು ಮುಖವನ್ನೇಕೆ ಮುದುಡಿ ಸಿರುವೆ ? ಬಾಯಿಬಿಟ್ಟು ಮಾತನಾಡು ಮಗು.

ಧರ್ಮರಾಜ: ಪೂಜ್ಯರೇ, ಸಂತಾಪದಿಂದ ಹೊಟ್ಟೆ ಉರಿಯುತ್ತಿದೆ. ತಡೆಯಲಾರೆ.

ವ್ಯಾಸರು: ನಿನಗೆ ತಾಪವೇ ? ಚೆನ್ನಾಯಿತು ? ಸೂರ್ಯನೇ ಕತ್ತಲೆಗಂಜಿ ಕುಳಿತರೆ ಆತನಿಗೆ ಬೆಳಕನ್ನು ಯಾರು ತೋರಿಸಬೇಕು ? ಬಿಸಿಲಿಗೆ ವಾಯುವೇ ಬೆಮರಿದರೆ ಆತನಿಗೆ ಬೀಸಣಿಕೆಯಿಂದ ಗಾಳಿ ಹಾಕುವವರಾರು ? ಸುಳ್ಳುನಂಜಿನಿಂದ ಗರುಡನೇ ಗತಿಗೆಟ್ಟರೆ ಅವನಿಗೆ ಮಂತ್ರಿಸುವವರಾರು ? ಜಗತ್ತನ್ನು ಸಂತಯಿಸಬೇಕಾದ ನೀನೇ ದುಃಖಕ್ಕೊಳಗಾದರೆ ನಿನ್ನನ್ನು ಸಂತಯಿಸುವವರಾರು ?

೩. 'ಅನಿಲಸಂಚಾರಮೊಂದಿನಿಸಿಲ್ಲದುರಿವ ಕಡುವೇಸಗೆಯ ಬಿಸಿಲಿಂದೆ ಬಸವಳಿದ ಕೋಮಲರಸಾಲದಂತೆ' ಎಂದು 'ಅರಸನನುತಾಪದಿಂ'ದಿದ್ದುದನ್ನು ಬಣ್ಣಿಸಿದ್ದಾನೆ ಕವಿ.

೪. ಭೂಮಂಡಲದ ಸಕಲ ಸಾಮ್ರಾಜ್ಯ ಕೈಸೇರಿತೆಂದು ಸಂತೋಷ ಪಡಬೇಕಾಗಿತ್ತು ಧರ್ಮರಾಜ. ಅದನ್ನು ಬಿಟ್ಟು ಇಲ್ಲದ ಚಿಂತೆಯಿಂದ ಕೊರಗುತ್ತಿದ್ದುದನ್ನು ಕಂಡು ವ್ಯಾಸರಿಗೆ ನಗೆ ಬಂದಿತು.

೫. 'ಪೂಜ್ಯರೇ, ಸಂತಾಪದಿಂದ ನನ್ನ ಹೊಟ್ಟೆ ಉರಿಯುತ್ತಿದೆ. ಅದನ್ನು ತಡೆಯುಲಾರೆ' ಎಂದು ಧರ್ಮರಾಜ ಉತ್ತರ ಕೊಟ್ಟ.

೬. ಧರ್ಮರಾಜನನ್ನು ಸೂರ್ಯ, ವಾಯುದೇವ, ಗರುಡ ಮುಂತಾದವರಿಗೆ ಹೋಲಿಕೆಯನ್ನು ಕೊಟ್ಟು ಆತನ ದೊಡ್ಡಿತೆಯನ್ನು ಹೇಳುತ್ತಾರೆ.

೭. ದುಃಖಿಯಾದ ಧರ್ಮರಾಜ ಅಥವಾ ಧರ್ಮರಾಜನ ದುಮ್ಮಾನ.

೮. ಈ ಮೂರು ಪದ್ಯಗಳಲ್ಲಿ 'ಕೆತ್ತ ಬಲ್ಗತ್ತಲೆಗೆ........' ಎಂಬ ಪದ್ಯ ಒಳ್ಳೆ ಹೃದಯಂಗಮವಾಗಿದೆ. ಅದರಲ್ಲಿ– ದುಃಖಿತರನ್ನು ಸಂತಯಿಸುವುದಕ್ಕೆ ಅವರ ಹಿರಿಮೆಯನ್ನು ಹೇಳುವ ಚಾಣಾಕ್ಷತನವಿದೆ. ಕೊಡುವ ಉದಾಹರಣೆಗಳು ಕೆಣಕುವುದಕ್ಕೆ ಆಸ್ಪದವಿಲ್ಲದಂತೆ ನಿರ್ಣಯಾತ್ಮಕವಾಗಿವೆ. ಆ ಮಾತಿನ ಹಿನ್ನೆಲೆಯಲ್ಲಿ ಆತ್ಮೀಯತೆಯ ಅಂತರಂಗ–ಅಂತಃಕರಣಗಳು ನಿಚ್ಚಳವಾಗಿ ಮೂಡಿವೆ.

೯. ಈ ಕವಿತೆಯಲ್ಲಿ ಧರ್ಮರಾಜನ ದುಮ್ಮಾನ, ವ್ಯಾಸರು ಆತನನ್ನು ಸಂತಯಿಸುವ ಸೂಕ್ತಿಗಳು ಒಳ್ಳೆ ಭಾವಪೂರ್ಣವಾಗಿವೆ. ಅವುಗಳನ್ನು ಮನಗಾಣಿಸುವುದಕ್ಕೆ 'ಬಸವಳಿದ ಕೋಮಲರಸಾಲದಂತೆ' 'ಕೆತ್ತಬಲ್ಗತ್ತಲೆಗೆ........' ಮುಂತಾಗಿ ಕೊಟ್ಟಿರುವ ಉಪಮೇಯ ದೃಷ್ಟಾಂತಗಳೂ ಬಲು ಬಂಧುರವಾಗಿವೆ, ಬೆಡಗಿನವಾಗಿವೆ. ಈ ಬಂಧದಲ್ಲಿರುವ ಶಬ್ದಗಳೆಲ್ಲ ಬೆಸೆದಂತಿರುವುದರಿಂದ 'ಶಯ್ಯಾ' ಲಕ್ಷಣ ಸ್ಪಷ್ಟವಾಗಿದೆ.

೧೦. 'ನಾನೃಷಿಃ ಕುರುತೇ ಕಾವ್ಯಂ' ಎಂದರೆ ರಸಋಷಿಯಲ್ಲದವನು ಕವಿತೆಗಳನ್ನು ಕಟ್ಟಲಾರ ಎಂದು ಹೇಳುವದುಂಟು. ಆ ರಸಋಷಿಗೇ ಸಹೃದಯತೆ ಮೀಸಲು. ಸಹೃದಯತೆಗೆ ನಿರ್ದಿಷ್ಟ ಮತ್ತು ನಿರ್ದುಷ್ಟಲೋಕಾನುಭವವಾಗುವುದು. ವ್ಯಾಸರು ಧರ್ಮರಾಯನ ದೊಡ್ಡಿತೆಯ ಬಗೆಗೆ ಕೊಟ್ಟಿರುವ ಲೋಕಾನುಭವಗಳಿಂದ ಕವಿಯ ರಸಋಷಿತ್ವವೂ ಆ ಪ್ರಸಂಗದಲ್ಲಿ ಅವುಗಳನ್ನು ಹೊಂದಿಸಿದ ಪ್ರತಿಭೆಯೂ ಚೆನ್ನಾಗಿ ವ್ಯಕ್ತವಾಗುತ್ತಿವೆ. 'ನೋವವರೊಳನುತಾಪ' ಕವಿಯ ಸಹೃದಯತೆಯ ಮತ್ತೊಂದು ಸಾಕ್ಷ್ಯ ಧರ್ಮರಾಜನ ದುಮ್ಮಾನವನ್ನು ಕಂಡು ವ್ಯಾಸರ ಕರುಳು ಕರಗಿ ಮಾತನಾಡುತ್ತಿರುವಲ್ಲಿ, ಈ ಗುಣವನ್ನು ಕಾಣಬಹುದು. ಈ ಕಾರಣಗಳಿಂದಾಗಿ ಲಕ್ಷ್ಮೀಶ ಕವಿಯನ್ನು ರಸಋಷಿಯೆಂದು ಸಹಜವಾಗಿಯೇ ಹೇಳಬಹುದಾಗಿದೆ.

ಅರೆಮುಗಿದಿರ್ದ ಕಣ್ಗಳುಮಲರ್ದ ಮೊಗಂ ಕಡಿವೋದಕೆಯ್ಯುಮಾ ।
ಸುರತರಮಾಗೆ ಕರ್ಚಿದವುಡುಂ ಬೆರಸನ್ಯಶರಪ್ರಹಾರ ಜ ।
ರ್ಜರಿತ ಶರೀರನಾಗಿ ನವಲೋಹಿತ ವಾರ್ಧಿಯೊಳಳ್ದಿ ಬಿಳ್ದನಂ ।
ಕುರುಪತಿನೋಡಿ ಕಂಡನಭಿಮನ್ಯು ಕುಮಾರನನಾಜಿ ವೀರನಂ ॥

ಪಲರಿರ್ದುಕಾದಿದರ್ ಮೆಯ್ | ಗಲಿಗಳ್ ನಿನ್ನೊಂದೆಮೆಯ್ಯೊಳಂ ತವೆ ಕೊಂದಯ್ |
ಪಲರಂ; ನಿನ್ನಂಪೆತ್ತಳ್ | ಮೊಲೆವೆತ್ತಳೆ ವೀರಜನನಿವೆಸರಂ ಪೆತ್ತಳ್ |
ಧಾರಿಣಿಯೊಳ್ ನಿಜ ಸಂಯುಗ | ಭಾರಮನಾಂತಿರ್ದ ವೀರಪುಂಗವರಿರೆ ತ |
ದ್ಭಾರಮನಾಂತಭಿಮನ್ಯು ಕು | ಮಾರಂ ಪುಗೆ ವೀರರಮಣನೆನಿಸಿದನಲ್ತೇ ||

## ಕೆಳಗಿನ ಪ್ರಶ್ನಗಳಿಗೆ ಉತ್ತರ ಕೊಡಿರಿ

೧. ಈ ಪದ್ಯ ಸಮೂಹಕ್ಕೆ ತಕ್ಕ ಶಿರೋಲೇಖವಾವುದು?

೨. ಈ ಎಲ್ಲ ಪದ್ಯಗಳ ಸರಳಾನುವಾದವನ್ನು ಬರೆಯಿರಿ.

೩. ಅಭಿಮನ್ಯುವನ್ನು 'ಅಜಿವೀರ'ನೆಂದು ಯಾವ ಲಕ್ಷಣಗಳಿಂದ ಹೇಳಿದೆ?

೪. 'ನಿನ್ನಂ ಪೆತ್ತಳ್ ಮೊಲೆವೆತ್ತಳೆ, ವೀರಜನನಿವೆಸರಂ ಪೆತ್ತಳ್' ಈ ವಾಕ್ಯದ ಅರ್ಥವನ್ನು ಸ್ಪಷ್ಟ ಮಾಡಿರಿ.

೫. ಅಭಿಮನ್ಯುವನ್ನು ವರ್ಣಿಸುವುದರಲ್ಲಿ ದುರ್ಯೋಧನನ ಯಾವಗುಣ ತೋರುತ್ತಿದೆ?

೬. 'ವೀರರಮಣನೆನಿಸಿದನಲ್ತೇ' ಎಂದು ದುರ್ಯೋಧನ ಏಕೆ ಹೊಗಳುತ್ತಾನೆ?

೭. ಈ ಪದ್ಯಗಳ ಭಾವ, ಬಂಧ, ಭಾಷೆಗಳ ಬಗೆಗೆ ನಿಮ್ಮ ಅಭಿಪ್ರಾಯವೇನು? ಚರ್ಚಿಸಿರಿ.

## ಉತ್ತರಗಳು

೧. ಗುಣಕ್ಕೆ ಗೌರವ ಅಥವಾ ಅಭಿಮನ್ಯುವಿನ ಆಧಿಕ್ಯ.

೨. ಅರೆಬಿರಿದ ಕಣ್ಣುಗಳು, ಅರಳಿದ ಮುಖ, ಕತ್ತರಿಸಿದ ಕೆಯ್, ಕೋಪದಿಂದ ಕಚ್ಚಿದ ತುಟಿಗಳುಳ್ಳವನಾಗಿ, ಹಗೆಗಳ ಬಾಣಗಳ ಹೊಡೆತಕ್ಕೆ ನುಗ್ಗುನುಗ್ಗಾಗಿ ಹೊಸ ನೆತ್ತರದ ಮಡುವಿನಲ್ಲಿ ಮುಳುಗಿದ ವೀರಾಧಿವೀರನಾದ ಅಭಿಮನ್ಯುವನ್ನು ದುರ್ಯೋಧನ ನೋಡಿದನು.

ಚಕ್ರವ್ಯೂಹದಲ್ಲಿ ನಿನ್ನನ್ನು ಹಲವಾರು ಜನ ಗಂಡುಗಲಿಗಳು ಮುತ್ತಿದರೂ ನೀನು ಒಂಟಿಗನಾಗಿಯೇ ಇದಿರಿಸಿ ಅವರೆಲ್ಲರನ್ನು ಕೊಂದುಹಾಕಿದೆ. ಎಂದಮೇಲೆ ನಿನ್ನ ತಾಯಿ ಬರಿಯ ಸ್ತ್ರೀ ಲಕ್ಷಣವುಳ್ಳ ಹೆಂಗುಸಲ್ಲ, ವೀರ ಜನನಿಯೆಂಬ ಹೆಸರನ್ನೇ ಹೆತ್ತವಳು.

ಆ ಯುದ್ಧ ಭಾರವನ್ನು ಹೊತ್ತಿದ್ದ ವೀರಶ್ರೇಷ್ಠರು ಬೇಕಾದಷ್ಟು ಜನರಿದ್ದರೂ ಕುಮಾರ ಅಭಿಮನ್ಯು ಆ ಭಾರವನ್ನು ತಾನಾಗಿಯೇ ಹೊತ್ತು, ಚಕ್ರವ್ಯೂಹವನ್ನು ಹೊಕ್ಕು ದರಿಂದ ವೀರರಮಣನೆನಿಸಿದನಲ್ಲವೇ?

೩. ಅಭಿಮನ್ಯುವಿನ ಪ್ರೇತವನ್ನು ನೋಡಿದಾಗ— ಮರಣ ಕಾಲದಲ್ಲಿಯೂ ಅರಳಿದ ಮುಖ, ಕೋಪದಿಂದ ಕಚ್ಚಿದ ತುಟಿ, ಕಡಿವಡೆದ ಕೆಯ್‌ಗಳು, ದೇಹದಲ್ಲಿ ನೆತ್ತರದ ಕೊನೆಯ ಹನಿ ಉಳಿಯುವ ವರೆಗೂ ಕಾದಾಡಿ ಮಡಿದ ಲಕ್ಷಣಗಳನ್ನು ತೋರಿಸುತ್ತಿದ್ದುದರಿಂದ, ಅಭಿಮನ್ಯುವನ್ನು ಅಜೀವೀರನೆಂದು ಬಣ್ಣಿಸಿದೆ.

೪. ಮೊಲೆ-ಮುಡಿ ಮೊದಲಾದುವು ಹೆಣ್ಣುಮಕ್ಕಳ ಲಿಂಗಲಕ್ಷಣಗಳು. ಆದರೆ ಅವುಗಳಿಂದಲೇ ಆಕೆಗೆ ಹೆಣ್ತನ ಸಾರ್ಥಕವಾಗುವುದಿಲ್ಲ. ವೀರಪ್ರಸವಿನಿ, ವೀರಜನನಿ ಎಂತಾಗಿ ಪ್ರಸಿದ್ಧಿಯನ್ನು ಪಡೆಯುವುದರಿಂದ, ಅರ್ಥಾತ್ ವೀರರಾದ ಮಕ್ಕಳನ್ನು ಪಡೆಯುವುದರಿಂದಲೇ ಆಕೆಯ ಕೀರ್ತಿ ಅಜರಾಮರವಾಗಿ ಉಳಿಯುವುದು. ಅಭಿಮನ್ಯು ವೀರರಮಣನೆಂದು ದುರ್ಯೋಧನನೇ ಹೇಳುತ್ತಾನೆ. ಆದುದರಿಂದ, 'ನಿನ್ನಂ ಪೆತ್ತಳ್ ಮೊಲೆವೆತ್ತಳೆ ? ವೀರಜನನಿ ವೆಸರಂ ವೆತ್ತಳ್' ಎಂಬ ಮಾತು ಸುಭದ್ರೆಗೆ ಸಾರ್ಥಕವಾಗಿದೆ.

೫. ವೀರನಾದ ಅಭಿಮನ್ಯುವನ್ನು ವರ್ಣಿಸುವುದರಿಂದ ದುರ್ಯೋಧನನ ವೀರತ್ವ, ಗುಣಕ್ಕೆ ಗೌರವವನ್ನು ಕೊಡುವ ಮಹಾನುಭಾವತೆಗಳು ವ್ಯಕ್ತವಾಗುತ್ತಿವೆ.

೬. ಭಾರತ ಯುದ್ಧದ ಕಾಲಕ್ಕೆ ಅಭಿಮನ್ಯು ತೀರ ಎಳೆ ವಯಸ್ಸಿನವ. ಆ ಯುದ್ಧದ ಭಾರವನ್ನು ಹಲವು ವೀರಾಧಿವೀರರು ಹೊತ್ತಿದ್ದರು. ಆಗ ಕಾದಾಡುವುದೆಲ್ಲ ಅವರ ಕೆಲಸವಾಗಿತ್ತು. ಆದರೆ ಚಕ್ರವ್ಯೂಹ ರಚನೆಯ ಸುದ್ದಿಯನ್ನು ಕೇಳಿ ಅವರೆಲ್ಲ ಹೌಹಾರಿದರು. ಆ ಪ್ರಸಂಗದಲ್ಲಿ, ತಾನು ಎಳೆಯನಾಗಿದ್ದರೂ ಯುದ್ಧಭಾರವು ತನ್ನ ಮೇಲಿರದಿದ್ದರೂ ಅಭಿಮನ್ಯು ಸ್ವಯಂಪ್ರೇರಿತನಾಗಿ ಚಕ್ರವ್ಯೂಹವನ್ನು ಹೊಕ್ಕು ಕಾದಾಡಿ ಮಡಿದುದರಿಂದ ಆತನನ್ನು "ವೀರರಮಣ" ಎಂದು ಗೌರವಿಸಲಾಗಿದೆ.

೭. ಈ ಕವಿತೆಯಲ್ಲಿ ವೀರರಸ ಉಕ್ಕಿ ಬರುತ್ತಿದೆ. ಕವಿಗೆ ಕನ್ನಡ ಭಾಷೆಯಲ್ಲಿ ಒಳ್ಳೆ ಪ್ರಭುತ್ವವಿದೆ. ಅಭಿಮನ್ಯುವಿನ ಪ್ರೇತದ ಶಬ್ದ ಚಿತ್ರವನ್ನು ಓದಿ ಓದಿದಂತೆ ಆ ಕಳೇಬರದ ರೇಖಾಚಿತ್ರ ಕಣ್ಮುಂದೆ ಕಟ್ಟಿದಂತಾಗುತ್ತಿದೆ. ಹಗೆಯನ್ನು ಹೊಗಳುವ ದುರ್ಯೋಧನನ ಮಹಾನುಭಾವತೆ ಕವಿಯ ಸಹೃದಯತೆಯನ್ನು ವ್ಯಕ್ತಮಾಡುವಂತಿದೆ. ಸಂಸ್ಕೃತ ಭಾರತದಲ್ಲಿ ದುರ್ಯೋಧನನೆಂದರೆ ಮಾನವ ವೇಷದ ಮಾತ್ಸರ್ಯ, ಜ್ವಲತ್ ಜ್ವಾಲಾಮುಖಿ, ನರರಾಕ್ಷಸ. ಆದರೆ ರನ್ನ ಕವಿಯ ದುರ್ಯೋಧನ ಕಡಿಗೋಡುವ ಹಾವಿನ ಹೆಡೆಯಲ್ಲಿಯೂ ಹೊಂಗೇದಗಿಯ ಹೊಡೆಯ ಚೆಲುವನ್ನು ಕಾಣುವ, ಬೇವಿನಲ್ಲಿಯೂ ಬೆಲ್ಲವನ್ನು ಬೆರಸಬೇಕೆನುವ ಮಹಾನುಭಾವ. ವೀರತನದಿಂದ ಹೋರಾಡಿದ ಹಗೆಯನ್ನಷ್ಟೇ ಅಲ್ಲ, ಆತನನ್ನು ಹೆತ್ತೊಡಲನ್ನೂ ಹೆಮ್ಮೆಯಿಂದ ಗೌರವಿಸುವ ಸಹೃದಯನಾದ ಸುಯೋಧನನನ್ನು ಸೃಷ್ಟಿಸಿದುದು ಕವಿಯ ರಸಋುಷಿತ್ವವನ್ನು ಎತ್ತಿ ತೋರಿಸುತ್ತಿದೆ. ವೀರನೊಬ್ಬ ತನ್ನ ವೈರಿಯನ್ನು ವೀರರಮಣನೆಂದು ಒಪ್ಪಿದುದು ಸಾಮಾನ್ಯ ಸಹೃದಯತೆಯಲ್ಲ. ಕಸದಲ್ಲಿಯೂ ರಸವನ್ನು ಕಾಣುವುದೇ ಕವಿ ಹೃದಯದ ಔದಾರ್ಯ. ಒಟ್ಟಾರೆ, ಈ ಕವಿತೆಗಳಲ್ಲಿ ಭಾವ, ಬಂಧ, ಭಾಷೆಗಳು ಮುಪ್ಪುರಿಗೊಂಡು ಓದುಗರ ಹೃದಯವನ್ನು ತಣಿಸಿ ತೊನೆದಾಡಿಸುತ್ತಿವೆ.

ಕೆಳಗಿನ ಪದ್ಯಗಳ ಸರಳಾನುವಾದವನ್ನು ಬರೆಯಿರಿ.

ಅನ್ನೆಗಂ ಪಶ್ಚಿಮಾಂಗನೆ ಲೀಲೆಯಿಂ ಪಿಡಿದ ।<br>
ರನ್ನ ದಿವ್ಯ್ಮೃಗನ್ನಡಿಯೊ, ವಾರುಣಿಯ ಮಸ್ತ ।<br>
ಕೋನ್ನತ ನವೀನ ಮಾಣಿಕ್ಯವೋ, ವಡವಾಗ್ನಿಯಿಂ ಸಿಡಿದ ಪೆರ್ಗಿಡಿಯಿದೊ ॥

ಮುನ್ನೀರ ಸತಿ ಪತಿಗೆಯಾರತಿಯೆತ್ತಿ ಜವ ।
ದಿನ್ನೆಗಪಿ ಚೆಲ್ಲಲಾಕೆಯ ಕೆಯ್ಯೊಳಿರ್ಪ ಪೊಸ ।
ಪೊನ್ನ ಪರಿಯಾಣಮೆನಲಸ್ತಗಿರಿಯ ಮಸ್ತಕದೊಳಿನಬಿಂಬ ಮೆಸೆದಿರ್ದುದು ॥
ತರಣಿಯಂ ಬೆನ್ನಟ್ಟಿಲೊಡನೆ ಪಿಡಿಯಾಳಾದ ।
ಕಿರಣಂಗಳಂ ಸೆರೆಯಿನಲ್ಲಿಟ್ಟುದೋ ತಮಂ ।
ನಿರುತಮಿದಿರ್ಗಂ ನಿಲ್ಲದೀ ತಮವಿದಂ ಮರೆಯೊಳಡಕದಿಂ ಪಿಡಿಯಲೆಂದು ॥
ಸರಸಿಜಸಖಂ ತನ್ನ ಬಲವನಲ್ಲಲ್ಲಿ ವೈ ।
ಗರೆದುಮಿರಲೆಂದು ನೇಮಿಸಿದನೋ ಪೇಳೆನಲ್ !
ಕರವೊಪ್ಪಿದುವು ದೀಪಮವು ತಮಸ್ತಾಪಮವು ತಿಮಿರಮತಿ ನಿಬಿಡಮಾಗೆ ॥

**ಸರಳಾನುವಾದ:** (ಅಷ್ಟರಲ್ಲಿ) ಪಶ್ಚಿಮ ದಿಕ್ಕೆಂಬ ಸ್ತ್ರೀ ಬೆಡಗಿನಿಂದ ಹಿಡಿದ ವ ಣಿ ಮಯವಾದ ಇಮ್ಮೈಗನ್ನಡಿಯೋ, ಆ ವಾರುಣಿಯ ಮುಡಿಯಲ್ಲಿರುವ ದೊಡ್ಡ ಹೊಸ ಮಾಣಿ ಕವೋ, ಸಮುದ್ರದ ಬೆಂಕಿಯಿಂದ ಸಿಡಿದ ದೊಡ್ಡ ಕಿಡಿಯೋ, ಸಮುದ್ರರಾಜನ ಹೆಂಡತಿ ಗಂಡನಿಗೆ ಆರತಿಯನ್ನು ಎತ್ತಿ ಚೆಲ್ಲಲು ಆಕೆಯ ಕೈಯ್ಯೊಳಗಿರುವ ಬಂಗಾರದ ಹೊಸ ತಳಿ ಗೆಯೋ ಎನುವಂತೆ ಪಶ್ಚಿಮ ಪರ್ವತದ ಶಿಖರದಲ್ಲಿ ಚಂದ್ರಬಿಂಬ ಚೆಲುವಾಗಿ ತೋರುತ್ತಿತ್ತು.

ಸೂರ್ಯನನ್ನು ಬೆನ್ನಟ್ಟಲು ಸೆರೆಸಿಕ್ಕ ಕಿರಣಗಳನ್ನು ಕತ್ತಲೆ ಮುಚ್ಚಿಟ್ಟಿರುವುದೋ; ಇಲ್ಲವೆ, ಕತ್ತಲೆ ಯಾವಾಗಲೂ ಇದಿರಿಗೆ ನಿಲ್ಲುವುದಿಲ್ಲ. ಇದನ್ನು ಮರೆಯಲ್ಲಿದ್ದುಕೊಂಡೇ ಹಿಡಿಯಬೇಕು. ಎಂದು ಕಮಲಮಿತ್ರನಾದ ಸೂರ್ಯನು ತನ್ನ ಸೈನ್ಯವನ್ನು ಅಲ್ಲಲ್ಲಿ ಮುಚ್ಚಿ ಮರೆಯಲ್ಲಿ ನಿಯಮಿಸಿರುವನೋ ಎನುವಂತೆ, ದಟ್ಟವಾದ ಕಗ್ಗತ್ತಲೆಯಲ್ಲಿ ಕಾವಳವನ್ನು ಕಳೆ ಯುವ ದೀಪಗಳು ಕಂಗೊಳಿಸುತ್ತಿದ್ದುವು.

ನೆನಪು: ಸರಳಾನುವಾದ, ಪದ್ಯಗಳಿಂದ ಸಂಭಾಷಣ, ರಸಗ್ರಹಣಗಳ ಬಗೆಗೆ ಈ ಮೊದಲು ನಿಮಗೆ ರೂಢಿಯಾಗಿದೆ. ಅವೆಲ್ಲವುಗಳನ್ನೂ ಸಂಗ್ರಹಿಸಿ, ಈ ಉದಾಹರಣೆಗಳಲ್ಲಿ ತೋರಿಸಿದೆ. ಸಾಮಾನ್ಯ ವಿಮರ್ಶೆಯ ಬಗೆಗೆ ಹೆಚ್ಚಾಗಿ ರೂಢಿಮಾಡಿಕೊಳ್ಳಬೇಕು.

## — ಬಳಕೆ ಮತ್ತು ಕೇಳಿಕೆ —

೧. ಆರಾದೊಡೇನೆನಗೆ ಬೆಸಸು ಬೆಸಸೀಗ ಸಂ ।
ಹಾರಮಂ ಮಾಳ್ಪೆನೆಂದೆನುತಲತ್ಯಧಿಕ ತರ ।
ಘೋರರೂಪಿಂದಲಾರ್ಭಟಿಸುತಿಹ ಪುತ್ರಪ್ರತಾಪಕೆಳೆ ನಗೆಗೂಡಿದ ।
ಕಾರುಣ್ಯದಿಂ ನೋಡಿ ಸಕಲರಂ ಗೆಲ್ವೆ ನೀ ।
ವೀರನಿಂತೀ ಭದ್ರಮೂರ್ತಿಯಿಂ ಭದ್ರವದು ।
ಕಾರಣಂ ನೀಂ ವೀರಭದ್ರನೆಂದೀಶ್ವರಂ ಕೃಪೆಯೊಳಂದಿತೆಂದನು ॥

ಕೇಳೆಲೆ ಕುಮಾರಕನೆ ದಕ್ಷನೆಂಬವನೆಮ್ಮ |
ನೋಲಗಿಪ ಹರಿಯಜೇಂದ್ರಗೂಡಿ ಯಾಗಮಂ |
ಮೇಳೈಸಲಾ ಕಥಾಂತರದೊಳೀಶ್ವರಿಯಳಿದಳಾ ಸ್ಥಳಕ್ಕೆ
ನೀನೆ ಪೋಗಿ ||
ಪೇಳೊಮ್ಮೆ ಬುದ್ಧಿಯಂ ರುದ್ರಾಂಶ ಮೀಯದೊಡೆ |
ಪಾಳಾಗಿಸಧ್ವರವನೊರ್ವರಂ ಬಿಡದೆ ಪಿಡಿ |
ಯೊಳಾಗಿ ತರ್ಪುದೆಂದೀಶ್ವರಂ ನೇಮಿಸಿ ಕುಮಾರನಂ
ಬೀಳ್ಕೊಟ್ಟನು ||
ಕೇಳ್ದನಾ ಹರವಚನವಮಂ ರೋಷವಾರ್ಧಿಯೊಳ |
ಗಾಳ್ದನಂತೆ ಗೆಯ್ವೆನೆಂದೆರಗಿ ಮೂದೇವ |
ರಾಳ್ದನಂ ಬೀಳ್ಕೊಂಡು ನಡೆತರುತ್ತೆಂದನಾ ಹರಿಯಜ
ಸುರೇಂದ್ರಾದ್ಯರಂ ||
ಬಾಳ್ದಲೆಗಳಂ ಕೊಂಬೆನುಳಿದವರ ಪೊಡೆಗಳಂ |
ಸೀಳ್ದಿಕ್ಕುವೆಂ ನಿಕ್ಕುವಂ ಕಾದಲೆನಗೆ ದೊರೆ |
ಯಾಳ್ದಿಟದೊಳಾರೆಂದು ವೀರಭದ್ರಂ ಕೋಟಸಿಡಿಲಂತೆ
ಗರ್ಜಿಸಿದನು

( ಕ. ಶ ಅರ್ಥ: ಭದ್ರ – ಗಟ್ಟಿ, ಮಂಗಲಕರ: ಈಶ್ವರಿ – ಪಾರ್ವತಿ; ಅಧ್ವರ – ಯಜ್ಞ; ಆಳ್ದಂ – ಮುಳುಗಿದವನು; ಆಳ್ದ – ಒಡೆಯ; ನಿಕ್ಕುವಂ – ನಿಶ್ಚಯ. )

ಮೇಲಿನ ಪದ್ಯಗಳನ್ನು ಸರಿಯಾಗಿ ತಿಳಿದು ಪ್ರಶ್ನಗಳಿಗೆ ಉತ್ತರಗಳನ್ನು ಬರೆಯಿರಿ

ಅ. ಈ ಪದ್ಯಪ್ರಸಂಗಕ್ಕೆ ತಕ್ಕ ತಲೆಬರೆಹ ಕೊಡಿರಿ.

ಆ. ಈ ಪದ್ಯಗಳ ಸರಳಾನುವಾದವನ್ನು ಬರೆಯಿರಿ.

ಇ. ಈ ಪದ್ಯಗಳ ನೆರವಿನಿಂದ ಸಂಭಾಷಣವನ್ನು ಸೃಷ್ಟಿಸಿರಿ.

ಈ. ಶಿವನು ಪುತ್ರಪ್ರತಾಪಕ್ಕೆ ಎಳೆನಗೆಗೂಡಲು ಕಾರಣವೇನು ?

ಉ. ವೀರಭದ್ರನೆಂದು ಹೆಸರಿಡುವುದಕ್ಕೆ ಕಾರಣವೇನು ?

ಊ. ದಕ್ಷನ ಯಾಗಕ್ಕೆ ಯಾವ ಯಾವ ದೇವತೆಗಳು ಹೋಗಿದ್ದರು ? ಆಗ ಪಾರ್ವತಿ ಪ್ರಾಣತ್ಯಾಗ ಮಾಡಲು ಕಾರಣವೇನು ?

ಎ. ಶಿವನು ವೀರಭದ್ರನಿಗೆ ಕೊಟ್ಟ ಸಂದೇಶವಾವುದು ?

ಏ. ವೀರಭದ್ರ ರೋಷವಾರ್ಧಿಯಲ್ಲಿ ಮುಳುಗಲು ಕಾರಣವೇನು ?

ಐ. ಆಗ ವೀರಭದ್ರ ಏನೆಂದು ಪ್ರತಿಜ್ಞೆ ಮಾಡುತ್ತಾನೆ ?

ಒ. ಕೇಳ್ದನಾ ಹರವಚನವಮಂ............ಎಂಬ ಪದ್ಯದಲ್ಲಿ ಯಾವ ಅಲಂಕಾರವಿದೆ ? ಲಕ್ಷಣವನ್ನು ಹೇಳಿ ಸಮನ್ವಯ ಮಾಡಿರಿ.

೬. ಪದ್ಯಗಳ ಭಾವ, ಬಂಧ, ಭಾಷೆಗಳ ಬಗೆಗೆ ನಿಮ್ಮ ಅಭಿಪ್ರಾಯವೇನು ?

೭. ಗೆಲವು ನಿನ್ನದು ಎಂದು ಬಿಂಕಬೇಡೆಲೆ ನಲ್ಲೆ ।
ನಾ ಸೋತೆ ತಿಳಿವುದಕೆ ನೂರಾರು ಸಲ ಸೋತ ।
ನಿನ್ನೆದೆಯ ಸವಿನೋವ, ನಿನ್ನೊಂದು ಕೆನ್ನೆಯಲಿ ।
ಗೆಲವು ಕೆಂಪೇರುತಿದೆ ನೋಡು ಮತ್ತೊಂದರಲಿ ।
ಹಳೆನೆನಹು ಸುಳಿಯುತಿದೆ ಸೋತಚಿತ್ತದ ಮಿದುವು ।
ಗೆದ್ದ ಬಿಂಕದ ಹಿಂದೆ ನಗುವ ಕ್ಷಮೆಯಾ ಹೂವು ।
ಕೂಡಿಬರೆ ಬಾಳಿನಲ್ಲಿ ಸೋಲೇನು ಗೆಲುವೇನು ?
ಇಂಪುಗಾನದ ರಾಗ ಯಾವುದಾದರು ಏನು ?
ಸರಸಮಧುಕೇಳಿಯಲಿ ಸೋಲೇನು ಸುಖಕಿರುವ
ಮತ್ತೊಂದು ಮೊಗವಲ್ತೆ ? ಸೋಲು ಗೆಲುವಿನ ಬೀಜ ।
ಬೆಳೆಯದಿದ್ದರೆ ಸಾಕು, ವಿರಸ ವಿಷವೃಕ್ಷವನು ।
ನಾನೊಮ್ಮೆ ಸೋತು ನೀನೊಮ್ಮೆ ಗೆದ್ದು ಬಾಳಲ್ಲಿ ।
ಸರಿಬೆಸವನಾಡೋಣ ಬೆಳಗಿರಲಿ ಜೀವನವು ।
ಸೋಲು ಸ್ನೇಹದ ಹಣತೆ, ಗೆಲವು ಉರಿಯುವ ಬತ್ತಿ ॥

— ಕೀರ್ತಿನಾಥ

ಈ ಪದ್ಯದ ಸರಳಾನುವಾದವನ್ನು ಬರೆಯಿರಿ, ಮತ್ತು ಈ ಪದ್ಯದಲ್ಲಿ ಕವಿಯ ಭಾವ ಗಾಂಭೀರ್ಯವನ್ನು ಸ್ಪಷ್ಟಮಾಡಿರಿ.

೩. ರಸಗ್ರಹಣದ ಬಗೆಗೆ ನೆನಪಿಡತಕ್ಕ ಮಾತುಗಳಾವುವು ?

# ೬. ಪತ್ರವ್ಯವಹಾರ

## (೧) ವೃತ್ತಪತ್ರಗಳೊಡನೆ

### ಅ. ಸಭೆ ಸಮಾರಂಭಗಳ ವರದಿ

ಸಂಯುಕ್ತ ಕರ್ನಾಟಕ ಸಂಪಾದಕರಿಗೆ: ವರದಿಗೆ ಸ್ಥಳವನ್ನೀಯುವುದು.

**ಹೈಸ್ಕೂಲಿನ ವಾರ್ಷಿಕೋತ್ಸವ.**

…………ಹೈಸ್ಕೂಲಿನ ವಾರ್ಷಿಕೋತ್ಸವ ದಿ… ……..ರಂದು ಒಳ್ಳೆ ಯಶಸ್ವಿಯಾಗಿ ಜರುಗಿತು. ದಕ್ಷಿಣಭಾಗದ ವಿದ್ಯಾಧಿಕಾರಿಗಳಾದ……………………..ರವರು ಮುಖ್ಯ ಅತಿಥಿಗಳಾಗಿದ್ದರು.

'ಉದಯವಾಗಲಿ ನಮ್ಮ ಚೆಲುವ ಕನ್ನಡನಾಡು' ಗೀತೆಯಿಂದ ಕಾರ್ಯಕ್ರಮಗಳು ಆರಂಭವಾದುವು. ಶಾಲೆಯ ಮುಖ್ಯಾಧ್ಯಾಪಕರು ಶಾಲೆಯ ಪ್ರಗತಿಪರ ವರದಿಯನ್ನು ಅಂಕೆಸಂಖ್ಯೆಗಳಿಂದ ಸ್ಪಷ್ಟಪಡಿಸಿದರು; ಮತ್ತು ಸಾರ್ವಜನಿಕರೂ ಸರಕಾರವೂ ಇದಕ್ಕೂ ಹೆಚ್ಚಾಗಿ ಸಾಹಾಯ್ಯ ಮಾಡುವುದು ಅತ್ಯವಶ್ಯವಿದೆಯೆಂದು ಬಿನ್ನವಿಸಿದರು.

ಆಮೇಲೆ, ಮುಖ್ಯ ಅತಿಥಿಗಳು ತಮ್ಮ ಭಾಷಣವನ್ನು ಆರಂಭಿಸಿದರು. ಆರಂಭದಲ್ಲಿ ಅವರು ಶಾಲೆಯ ಪ್ರಗತಿಯ ಬಗೆಗೆ ತಮ್ಮ ಆನಂದವನ್ನು ವ್ಯಕ್ತಪಡಿಸಿ, ವಿದ್ಯಾರ್ಥಿಗಳಿಗೆ ಈ ರೀತಿ ಉಪದೇಶ ಮಾಡಿದರು:

'ನಮ್ಮ ಶಿಕ್ಷಣದ ಧ್ಯೇಯ ಮಾನವನಿಗೆ ಉಜ್ವಲ ಭವಿಷ್ಯವನ್ನು ನಿರ್ಮಿಸುವುದೂ ಪರಂಪರಾಗತವಾಗಿ ಬಂದ ಭಾರತೀಯ ಸಂಸ್ಕೃತಿಯನ್ನು ಉಳಿಸಿ ಬೆಳಸಿ ಬಳಸಿಕೊಳ್ಳುವುದೂ ಆಗಿದೆ. ವಿದ್ಯಾರ್ಥಿಗಳೇ ಈ ಸಂಸ್ಕೃತಿ ಸಂಪತ್ತಿನ ವಾರಸದಾರರು. ಅದನ್ನು ಅವರು ಪರಿಶ್ರಮದಿಂದ ಕಾಪಾಡಿಕೊಳ್ಳಬೇಕು. ಪರಂಪರೆಯಿಂದ ಬಂದ ಹುರುಡಿಲ್ಲದ ಹಳೆಯ ವಿಚಾರಗಳ ವಿರುದ್ಧ ಹೋರಾಡಿ ಸಮಾಜಸಂವರ್ಧನೆಗೆ ಸಾಹಾಯ್ಯಕವಾದ ಹೊಸ ವಿಚಾರಗಳನ್ನು ಪೋಷಿಸಬೇಕು. ಜಗದ್ವಿಖ್ಯಾತ ಶಾಸ್ತ್ರವೇತ್ತರಾದ ನ್ಯೂಟನ್, ಗ್ಯಾಲಿಲಿಯೋ, ಕೋಲಂಬಸರ ಜೀವನ ಚರಿತ್ರಗಳು ನಿಮಗೆ ಇದೇ ಮಾತನ್ನೇ ಒತ್ತಿ ಹೇಳುತ್ತಿವೆ. ನೀವೂ ಇದೇ ದಿಶೆಯಲ್ಲಿಯೇ ಪ್ರಯತ್ನ ಮಾಡಿರಿ........'

ಅವರು ಮುಂದುವರಿದು ಹೇಳಿದುದೇನಂದರೆ — ಶಾಲೆಯ ಪ್ರಗತಿಗೆ ಸರಕಾರವೂ ಸಾಮಾಜಿಕರೂ ಕೂಡಿಯೇ ಪ್ರಯತ್ನಿಸಬೇಕು. ಸರಕಾರವೊಂದೇ ಏನನ್ನೂ ಮಾಡಲಾರದು. ಹಿಂದಕ್ಕೆ ನಾಲಂದ ವಿಶ್ವವಿದ್ಯಾಲಯ ಅಷ್ಟೊಂದು ಜಗದ್ವಿಖ್ಯಾತವಾಗುವುದಕ್ಕೆ ಸಾಮಾಜಿಕರ ಬೆಂಬಲವೇ ವಿಶೇಷವಾಗಿದ್ದಿತು. ಸಾಮಾಜಿಕರು ಈ ಮಾತನ್ನು ಮನಗಾಣಬೇಕು........

ಅತಿಥಿಗಳ ಭಾಷಣ ಮುಗಿದ ಮೇಲೆ ಅವರಿಗೆ ಹೂಮಾಲಾ ಸಮರ್ಪಣವಾಯಿತು. ವಂದೇಮಾತರಂ ಗೀತೆಯೊಡನೆ ಸಭೆ ಮುಗಿಯಿತು. ರಾತ್ರಿಯಲ್ಲಿ ಮನೋರಂಜಕವಾದ ವಿವಿಧವಿನೋದಾವಳಿಗಳಾದುವು.

### ಆ. ವಿಮರ್ಶಾತ್ಮಕ

ನವಯುಗ ಸಂಪಾದಕರು ಹುಬ್ಬಳ್ಳಿ ಇವರಿಗೆ:

ಈ ವಿಮರ್ಶಾತ್ಮಕ ಲೇಖಕ್ಕೆ ಪತ್ರಿಕೆಯಲ್ಲಿ ದಯವಿಟ್ಟು ಇಂಬುಗೊಡುವಿರಾ?

ಮಹಾವಿದ್ಯಾಲಯದ ಬೋಧಭಾಷೆ ಯಾವುದಾಗಬೇಕು?

**ಹಿಂದಿಯೋ ಪ್ರಾಂತಿಕಭಾಷೆಯೋ?**

ಮುಂಬಯಿ ಸರಕಾರ ರಾಜ್ಯದಲ್ಲಿಯ ವಿದ್ಯಾಪೀಠಗಳ ಉಪಕುಲಪತಿಗಳಿಗೆಲ್ಲ ನಿರ್ದೇಶಕ ಪತ್ರಗಳನ್ನು ಕಳಿಸಿದೆ; ಅದರಲ್ಲಿ ೧೯೫೫ನೆಯ ವರ್ಷದಿಂದ ಹಿಂದೀ ಭಾಷೆಯು ಮುಖಾಂ

ತರ ಉಚ್ಚ ಶಿಕ್ಷಣವನ್ನು ಸಾಗಿಸುವ ಏರ್ಪಾಟಗಳನ್ನು ಮಾಡತಕ್ಕದೆಂದು ಸೂಚಿಸಿದೆ. ಅದಕ್ಕೆ ಕಾರಣವನ್ನು ವಿವರಿಸುತ್ತ (೧) ೧೯೬೫ರಿಂದ ಭಾರತ ಆಡಳಿತಕ್ಕಾಗಿ ಇಂಗ್ಲಿಷ ಬದಲು ಹಿಂದಿಯನ್ನು ಉಪಯೋಗಿಸುವ ಬಗೆಗೆ ಭಾರತ ಸರಕಾರದ ನಿರ್ಣಯ. (೨) ಅದಕ್ಕನುಸಾರವಾಗಿ ಮಾಧ್ಯಮಿಕ ಶಾಲೆಗಳ ಮೊದಲಿನ ಮೂರು ಅಥವಾ ಎರಡು ವರ್ಗಗಳಿಂದ ಇಂಗ್ಲಿಷನ್ನು ತೆಗೆಯುವುದು. (೩) ರಾಷ್ಟ್ರಭಾಷೆಯಾದ ಹಿಂದಿಯನ್ನು ಮಾಧ್ಯಮಿಕ ಶಾಲೆಗಳ ೮ನೆಯ ವರ್ಗದಲ್ಲಿ ಪ್ರಾರಂಭ ಮಾಡಿ ೧೯೫೫ರೊಳಗಾಗಿ ಬಾಲಕರಿಗೆ ೭ ವರ್ಷ ಹಿಂದೀ ಜ್ಞಾನ ೫ ವರ್ಷ ಇಂಗ್ಲಿಷ ಜ್ಞಾನ ಮಾಡಿಕೊಡುವ ಮುಂಬಯಿ ಸರಕಾರದ ಧೋರಣ ಈ ಸಂಗತಿಗಳನ್ನು ವಿವರಿಸಿದೆ. ಈ ಬಗೆಗೆ ಅನೇಕ ಚರ್ಚೆಗಳಾಗಿವೆ. ಆದರೂ ಕೊನೆಯ ನಿರ್ಣಯವಿಲ್ಲ.

ಈ ನಿರ್ದೇಶವನ್ನು ಸ್ವಲ್ಪದರಲ್ಲಿಯೇ ವಿಮರ್ಶಿಸಬೇಕೆಂದು ನಮ್ಮ ಮನೀಷೆ. ಹಿಂದೀಯನ್ನು ಉಚ್ಚಶಿಕ್ಷಣದ ಬೋಧಭಾಷೆಯನ್ನಾಗಿಸಲು ಕಾರಣವೇನು? ಆಡಳಿತದ ಅನುಕೂಲತೆಯೋ ಲೋಕಶಿಕ್ಷಣದ ಸೌಕರ್ಯವೋ? ಆಡಳಿತದ ಅನುಕೂಲತೆಯೆಂದರೆ, ಜನಸಾಮಾನ್ಯರಿಗೆಲ್ಲ ಸಂಬಂಧಿಸಬಹುದಾದ ಈ ವಿಷಯದಲ್ಲಿ ಮಹಾವಿದ್ಯಾಲಯಗಳನ್ನು ಬಲಿಕೊಡುವ ಕಾರಣ ಬೀಳುವುದಿಲ್ಲ. ಲೋಕಶಿಕ್ಷಣದ ಸೌಕರ್ಯವೆಂದರೆ– ಹಿಂದೀಯಲ್ಲಿ ಇಂಗ್ಲಿಷ ಭಾಷೆಯಲ್ಲಿರುವಷ್ಟು ಸಾಹಿತ್ಯ ಸಂಪತ್ತಿಯಿದೆಯೇ ಎಂದು ಕೇಳಬೇಕಾಗುತ್ತಿದೆ. ಇಂಗ್ಲಿಷ ಭಾಷೆಯ ಅಭ್ಯಾಸದಿಂದ ನಮ್ಮ ಸಂಸ್ಕೃತಿಗೆ ಪೆಟ್ಟುಬಿದ್ದಿರಬಹುದು; ಆದರೆ ಅದರಿಂದಾದ ಜ್ಞಾನಲಾಭವನ್ನು ಅಲ್ಲಗಳೆಯುವಂತಿಲ್ಲ. ಮಾನ್ಯ ಮುಖ್ಯ ಮಂತ್ರಿಗಳವರಿಗೂ ಈ ಮಾತು ಒಪ್ಪಿಗೆಯಿದೆ. ಎಂತೆಯೇ ಮಾಧ್ಯಮಿಕ ಶಾಲೆಗಳಲ್ಲಿ ೫ ವರ್ಷ ಇಂಗ್ರೇಜಿಯನ್ನು ಇಟ್ಟಿದ್ದಾರೆ.

ಈ ದೃಷ್ಟಿಯಲ್ಲಿ ಮಹಾವಿದ್ಯಾಲಯದ ಬೋಧಭಾಷೆ ಇಂಗ್ರೇಜಿಯೇ ಇರಬೇಕೆಂದು ಹೇಳಬೇಕಾಗುತ್ತಿದೆ. ಸರ್ ರಾಧಾಕೃಷ್ಣನ್ ಸಮಿತಿಯವರೂ ಈ ಮಾತನ್ನು ಒಪ್ಪುತ್ತಾರೆ. ಹಿಂದೀ ಭಾಷೆಯಲ್ಲಿ ವಿಜ್ಞಾನ ಮೊದಲಾದ ವಿಷಯಗಳು ಇನ್ನೂ ಅತ್ಯಧಿಕ ಪ್ರಮಾಣದಲ್ಲಿ ಇಲ್ಲವೆಂಬುದು ಅನುಭವಕ್ಕೆ ಒಪ್ಪುವ ಮಾತಾಗಿದೆ.

ಇನ್ನು ಇಂಗ್ರೇಜಿ ಪರಕೀಯ ಭಾಷೆಯೆಂದು ಬಿಟ್ಟುಬಿಡಬೇಕೆಂದರೆ, ದಕ್ಷಿಣ ಭಾರತದ ದ್ರಾವಿಡ ಭಾಷಾ ಪ್ರಾಂತಗಳಿಗೆ ಹಿಂದಿಯೂ ಪರಕೀಯ ಭಾಷೆಯೇ ಆಗುವುದು. ಆದುದರಿಂದ, ಪ್ರಾಂತೀಯ ಭಾಷೆಗಳೇ ಮಹಾವಿದ್ಯಾಲಯದ ಬೋಧಭಾಷೆಗಳಾಗಬೇಕೆಂದು ಅರ್ಥಾತ್ ಹೊಳೆಯುತ್ತಿದೆ. ಇನ್ನು ರಾಧಾಕೃಷ್ಣನ್ ಸಮಿತಿಯೂ ಒಪ್ಪುತ್ತಿದೆ. ಪ್ರಾಂತೀಕರಣವಾದ ಮೇಲೆ ಈ ಮಾತು ಅನಿವಾರ್ಯವೂ ಆದೀತು

ಒಟ್ಟಾರೆ ಹೇಳುವದಾದರೆ: ಆಡಳಿತದ ಮಟ್ಟಿಗೆ ಹಿಂದಿಯೇ ರಾಷ್ಟ್ರಭಾಷೆಯಾಗಲಿ; ಮಹಾವಿದ್ಯಾಲಯಗಳಲ್ಲಿ ಮಾತ್ರ ಪ್ರಾಂತಿಕ ಭಾಷೆಗಳೇ ಬೋಧಭಾಷೆಗಳಾಗಬೇಕೆಂದು ನಮಗೆನಿಸುತ್ತಿದೆ. ಹೀಗಾದರೆಯೇ ವಿದ್ಯಾರ್ಥಿಗಳು ವಿಷಯಗಳನ್ನು ಸರಿಯಾಗಿ ತಿಳಿಯಬಲ್ಲರು; ತಿಳಿದುದನ್ನು ಹೆರವರಿಗೆ ಮನಗಾಣಿಸಬಲ್ಲರು. ಇವರಿಂದ ಇನ್ನೂ ಒಂದು ಲಾಭ

ವೆಂದರೆ, ಪರಕೀಯರ ಆಳಿಕೆಯಲ್ಲಿ ಕತ್ತಲೆಯಲ್ಲಿ ಕುಳಿತಿರುವ ಪ್ರಾಂತೀಯ ಭಾಷೆಗಳು ಭರದಿಂದ ಬೆಳಕಿಗೆ ಬರಲು ಸಾಹಾಯ್ಯವೂ ಆಗುವುದು. ಮಾನ್ಯ ಮಂತ್ರಿಗಳೂ ಸಹೃದಯದ ಸಾಮಾಜಿಕರೂ ಈ ವಿಷಯವನ್ನು ಸಂಪೂರ್ಣವಾಗಿ ಸಮಾಲೋಚಿಸಬೇಕೆಂದು ಬಿನ್ನಹ.

## ಇ. ದೂರುಗಳು

ವಿಶಾಲ ಕರ್ನಾಟಕ ಪತ್ರಿಕಾ ಸಂಪಾದಕ ಮಹಾಶಯರಿಗೆ—

ಪ್ರಿಯರೇ, ಇದನ್ನು ದಯವಿಟ್ಟು ಹುಲುಬಿಸುವಿರಾ ?

ನಮ್ಮ ಊರು... ...........ಜಿಲ್ಲೆಯ ತೀರ ದಕ್ಷಿಣದಲ್ಲಿದೆ. ಇಲ್ಲಿಂದ ಸುತ್ತಲೂ ಎಂಟು ಹತ್ತು ಹರದಾರಿಗಳೊಳಗೆ ಹೆರಿಗೆಯ ಆಸ್ಪತ್ರೆಯಿಲ್ಲ. ಇದರಿಂದಾಗಿ ನಮ್ಮ ಊರಲ್ಲಿ ಮತ್ತು ನೆರೆಹೊರೆಯ ಹಳ್ಳಿಗಳಲ್ಲಿ ಪ್ರತಿವರುಷವೂ ಹೆರಿಗೆಯ ದುರ್ಮರಣಗಳು ಆಗುತ್ತಲೇ ಇವೆ.

ಈ ಹೆರಿಗೆಯ ಆಸ್ಪತ್ರೆಯ ವಿಚಾರವನ್ನು ಗ್ರಾಮಪಂಚಾಯತಿ ಜನತೆಯ ಇದಿರಿಗೆ ತಂದಿತು. ತಡವಿಲ್ಲದೆ ನಾಗರಿಕರು ತಮ್ಮ ಪರವಾಗಿ ಧನ ಪೂರೈಸಿದರು. ಸರಕಾರಿ ಅಧಿಕಾರಿಗಳ ನೇತೃತ್ವದಲ್ಲಿ ಆಸ್ಪತ್ರೆಯ ನಿವೇಶಸ್ಥಳವನ್ನು ನೋಡಿದುದಾಯಿತು.

ಈ ಮಾತಿಗೆ ಒಂದುವರೆ ವರ್ಷವಾಯಿತು. ಪಂಚಾಯತಿ ಪಕ್ಷ-ಪಂಗಡಗಳ ತೀವ್ರ ತಿಕ್ಕಾಟದ ಪರಿಣಾಮವಾಗಿ ಈ ಆಸ್ಪತ್ರೆಯ ವಿಷಯವೇ ಅವರಿಗೆ ಮರೆತಂತಾಗಿದೆ. ಸರಕಾರಕ್ಕೆ ಬರೆದರೂ ಈ ವರೆಗೂ ಉತ್ತರವಿಲ್ಲ.

ಹೆರಿಗೆಯ ಆಸ್ಪತ್ರೆಯ ವಿಷಯವೇನೂ ರಾಜಕಾರಣಕ್ಕೆ ಸಂಬಂಧಪಟ್ಟುದಲ್ಲ. ಲೋಕಕಲ್ಯಾಣದ ವಿಷಯವಿದು. ಇದು ತಡವಾದಂತೆಲ್ಲ ಎಲ್ಲರಿಗೂ ತೊಂದರೆ ತಪ್ಪಿದುದಲ್ಲ. ಆದುದರಿಂದ ನಮ್ಮ ಪಂಚಾಯತಿಯವರು ಆದಷ್ಟು ಬೇಗನೆ ಆಸ್ಪತ್ರೆಯನ್ನು ಕಟ್ಟಿಸಿ ಜನತೆಯ ಸಂಕಟ ಪರಿಹಾರಮಾಡಿದ ಪುಣ್ಯಭಾಗಿಗಳಾಗಬೇಕೆಂದು ಬಿನ್ನವಿಸುತ್ತೇವೆ. ಸರಕಾರಿ ಆರೋಗ್ಯಖಾತೆಯ ಅಧಿಕಾರಿಗಳಾದರೂ ಇತ್ತ ತೀವ್ರ ಲಕ್ಷ ಕೊಡಬೇಕೆಂದು ಬೇಡುವೆವು.

---

ಎಸ್. ಟಿ. ಬಸ್ಸುಗಳ ಮೇಲಧಿಕಾರಿಗಳ ಗಮನಕ್ಕೆ—

ಬದಾಮಿಯಿಂದ ಗುಳೇದಗುಡ್ಡಗಳ ನಡುವಿನ ಎಸ್. ಟಿ. ಬಸ್ಸುಗಳ ಹೆದ್ದಾರಿ........ ಹಳ್ಳಿಯ ಕೂಟ ರಸ್ತೆಯ ಕತ್ತರಿಯ ಹತ್ತಿರವೇ ಹಾಯ್ದಿದೆ. ಆ ಕತ್ತರಿಯಿಂದ ನಮ್ಮ ಹಳ್ಳಿ ಸುಮಾರು ಮುಕ್ಕಾಲು ಮೈಲು ದೂರದಲ್ಲಾಗಬಹುದು. ಅಲ್ಲಿಂದ ಊರವರೆಗೂ ಹಸನಾದ ಹಾದಿಯಿದೆ. ದಿನಾಲು ಚಕ್ಕಡಿಗಳ ಓಡಾಟವಲ್ಲದೆ, ಆಗಾಗ ವ್ಯಾಪಾರಸ್ಥರ ಟ್ರಕ್ಕುಗಳೂ ಬಂದು ಹೋಗುತ್ತಿವೆ. ವಾಹನಗಳ ಓಡಾಟಕ್ಕೆ ವ್ಯತ್ಯಯವೇನೂ ಇಲ್ಲ.

ಹೀಗಿದ್ದರೂ ಎಸ್. ಟಿ. ಬಸ್ಸು ನಮ್ಮ ಊರಿಗೆ ಬರುವುದಿಲ್ಲ. ನಮ್ಮಲ್ಲಿ ನಿತ್ಯವೂ ಜನರ ಓಡಾಟಕ್ಕೇನೂ ಕಡಿಮೆಯಿಲ್ಲ. ನಮ್ಮ ಪ್ರಯಾಣಗಳಿಗೆ ಕೂಟದ ಕತ್ತರಿಯೇ ಗತಿ

ಯಾಗಿದೆ. ಬಿಚ್ಚುಗೈಯಿದ್ದ ಪ್ರಯಾಣಿಕರಿಗೆ ಆದರಿಂದೇನೂ ತೊಂದರೆಯಾಗಲಿಕ್ಕಿಲ್ಲ. ಸಾಮಾನುಗಳ ಭಾರವಿದ್ದವರಿಗೆ ಅಲ್ಲಿಂದ ಊರನ್ನು ಕಾಣುವುದಾಗಲಿ ಊರಿಂದ ಅಲ್ಲಿಗೆ ಮುಟ್ಟುವದಾಗಲಿ ತುಂಬಾ ತೊಂದರೆಯಾಗುತ್ತಿದೆ. ಹೆಣ್ಣುಮಕ್ಕಳಿಗಂತೂ ಇನ್ನಿಷ್ಟು ತೊಂದರೆ. ಅಕಸ್ಮಾತ್ ಕತ್ತಲೆಯ ದಿನಗಳಲ್ಲಿ ಮೋಟರು ಕೆಟ್ಟು ರಾತ್ರಿ ಕತ್ತರಿಯಲ್ಲಿ ಇಳಿಯುವ ಪ್ರಸಂಗ ಬಂದರೆ, ಆಗ ದೇವರೇಗತಿ !

ಇಷ್ಟೆಲ್ಲ ತೊಂದರೆಯನ್ನು ತಪ್ಪಿಸುವುದಕ್ಕಾಗಿ ನಮ್ಮ ಹಳ್ಳಿಯವರೆಗೂ ಬಸ್ಸುಗಳನ್ನು ಬಿಡಬೇಕೆಂದು ಮೇಲಧಿಕಾರಿಗಳನ್ನು ಕೇಳಿಕೊಳ್ಳುತ್ತೇವೆ. ಅಲ್ಲಿಗೆ ಹೋಗಿ ಬರುವುದಕ್ಕೆ ಹೆಚ್ಚು ವೇಳೆಯೂ ಹಿಡಿಯುವುದಿಲ್ಲ. ಹೆಚ್ಚು ಚಾರ್ಜು ಕೊಡುವುದಕ್ಕೂ ಸಿದ್ಧರಿದ್ದೇವೆ. ಸಂಬಂಧಪಟ್ಟ ವರಿಷ್ಠರು ಹಳ್ಳಿಗರ ಈ ಬೇಡಿಕೆಯನ್ನು ಮನ್ನಿಸುವರೆಂದು ಆಶಿಸೋಣವೇ ?

## (೨) ಮನವಿ (ಅರ್ಜಿಗಳು)

ಯಾರಿಂದ— ಬ. ರೇ. ಹೊಟ್ಟಿ, ಬಿ. ಕಾಮ್. (ಆನರ್ಸ)

ಪೋಸ್ಟ ಮತ್ತು ವಸತಿ: **ಕೂಳೂರು**

ಜಿಲ್ಹಾ— ಬಾಳೂರು.

ವಿಷಯ: ಬ್ಯಾಂಕಿನಲ್ಲಿ ಮ್ಯಾನೇಜರ ಸ್ಥಳಕ್ಕೆ ನಿಯಮಿಸಿಕೊಳ್ಳುವ ಬಗೆಗೆ.

ಚೇರಮನ್.............................................. ಬ್ಯಾಂಕ

ಇವರಿಗೆ—

ಕೆಳಗೆ ಸಹಿ ಮಾಡಿದ ನಾನು ವಿನಯಪೂರ್ವಕವಾಗಿ ಬರೆದುಕೊಳ್ಳುವುದೇನೆಂದರೆ— ತಾವು ದಿ· ೨–೧–೫೫ ನೆಯ..............ಪತ್ರಿಕೆಯಲ್ಲಿ 'ಮ್ಯಾನೇಜರರು ಬೇಕು' ಎಂದು ಕೊಟ್ಟ ಹುಲುಬನ್ನು ಲಕ್ಷ್ಯಪೂರ್ವಕವಾಗಿ ಓದಿರುವೆ. ಆ ಅಧಿಕಾರಕ್ಕೆ ನನಗಿರುವ ಪಾತ್ರತೆಗಳನ್ನು ಸವಿನಯವಾಗಿ ಸಾದರಪಡಿಸುವೆ

೧. ನಾನು ೧೯೫೨ ನೆಯ ವರುಷ ಮುಂಬಯಿ ವಿಶ್ವವಿದ್ಯಾಲಯದ ಬಿ. ಕಾಮ್, ಪರೀಕ್ಷೆಯಲ್ಲಿ ದ್ವಿತಿಯ ತರಗತಿಯಲ್ಲಿ ಉತ್ತೀರ್ಣನಾಗಿರುವೆ. ಅದರಲ್ಲಿ ಪಡೆದ ಗುಣಗಳು ೧೦೦ ಕ್ಕೆ ೫೨·೬.

೨. ನನ್ನ ಮುಖ್ಯ ವಿಷಯ ಅಕೌಂಟನ್ಸೀ.

೩. ಕಳೆದ ೧।। ವರ್ಷಗಳಿಂದ..................ಬ್ಯಾಂಕಿನಲ್ಲಿ ಹಿರಿಯ ಕರಣಿಕ (ಹೆಡ್ ಕ್ಲಾರ್ಕ) ನಾಗಿ ಕೆಲಸದ ಅನುಭವವನ್ನು ಪಡೆದಿರುವೆ. ಮತ್ತು ನನ್ನ ಕರ್ತವ್ಯದಕ್ಷತೆಯಿಂದ ಸಂಸ್ಥೆಯ ವರಿಷ್ಠರನ್ನು ಸಮಾಧಾನಪಡಿಸಿರುವೆ. ನನ್ನ ಯೋಗ್ಯತೆ, ಅನುಭವ, ಕರ್ತವ್ಯತತ್ಪರತೆಗಳ ಬಗೆಗೆ ಅದೇ ಸಂಸ್ಥೆಯ ಚೇರಮನ್ನರ ಪ್ರಶಸ್ತಿ ಪತ್ರವನ್ನು ಇದರೊಡನೆ ಇಟ್ಟಿರುವೆ. ಮತ್ತೆ ಬೇಕೆಂದರೆ ನನ್ನ ಸಚ್ಛೀಲದ ಬಗೆಗೆ ಬೇರೆ ಸದ್ಗೃಹಸ್ಥರ ಮೆಚ್ಚು ಕಾಗದಗಳನ್ನೂ ತರುವೆ.

೪. ನನ್ನ ವಯಸ್ಸು ೨೪ ವರುಷಗಳು.

೫. ನಾನು ಬಾಳೂರು ಜಿಲ್ಲೆಯಲ್ಲಿಯೇ ಹುಟ್ಟಿ ಬೆಳೆದವನು.

೬. ನಾನು ಕನ್ನಡ ಭಾಷೆಯನ್ನು ಚೆನ್ನಾಗಿ ಬಲ್ಲೆ. ಹಿಂದೀಯ ರಾಷ್ಟ್ರಭಾಷಾ ಪರೀಕ್ಷೆಯಲ್ಲಿಯೂ ಉತ್ತೀರ್ಣನಾಗಿರುವೆ.

ಮಾನ್ಯರು ಮೇಲ್ಕಂಡ ಪಾತ್ರತೆಗಳನ್ನು ಸಾವಧಾನವಾಗಿ ವಿಚಾರಿಸಬೇಕು; ಮತ್ತು ನನ್ನನ್ನು ತಮ್ಮ.............. ಬ್ಯಾಂಕ ಸಂಸ್ಥೆಯ ಮ್ಯಾನೇಜರನನ್ನಾಗಿ ನಿಯಮಿಸಿಕೊಳ್ಳಬೇಕು, ಎಂದು ಬೇಡಿಕೊಳ್ಳುವೆ. ನಿಮ್ಮ ಸಂಸ್ಥೆಯ ಎಲ್ಲ ನಿಯಮ ನಿಟ್ಟುಗಳಿಗೂ ನನ್ನ ಒಪ್ಪಿಗೆಯಿದೆ. ಮತ್ತು ನನ್ನ ನೌಕರಿಯ ಭದ್ರತೆಗಾಗಿ ಸಂಸ್ಥೆ ಬೇಡಬಹುದಾದ ಕಾಗದ-ಪತ್ರಗಳನ್ನು ಮಾಡಿಕೊಡಲೂ ಸಿದ್ಧನಿರುವೆ.

ಬೇಡಿಕೆಗೆ ಮನ್ನಣೆ ದೊರೆಯುವುದೆಂದು ನಂಬಿರುವೆ. ಈ ಉಪಕಾರಕ್ಕಾಗಿ ತಮಗೆ ಎಂದೆಂದಿಗೂ ಋಣಿಯಾಗಲಿರುವ,

ತಮ್ಮ ನಂಬುಗೆಯ

ದಿ. ೫-೧-೧೯೫೫ ಬ. ರೇ. ಹೊಟ್ಟೆ

**ಚೇರಮನ್ನರಿಂದ ಉತ್ತರ—**

ಜಾ. ನಂ.______________

೮-೧-೫೫

ಶ್ರೀ. ಬ. ರೇ. ಹೊಟ್ಟೆ, ಬಾಳೂರು ಇವರಿಗೆ—

...............ಬ್ಯಾಂಕಿನ ಚೇರಮನ್ನರು ತಿಳಿಸುವುದೇನಂದರೆ— ನಿಮ್ಮ ದಿ ೫-೧-೫೫ ನೆಯ ಅರ್ಜಿ ಮುಟ್ಟಿದೆ. ದಿ. ೧೦-೧-೫೫ನೆಯ ದಿವಸ ಮಧ್ಯಾಹ್ನ ೩ ಗಂಟೆಗೆ ಸಂಸ್ಥೆಯ ಕಚೇರಿಯಲ್ಲಿ ನಮ್ಮನ್ನು ನೀವು ಕಾಣಬೇಕು. ಬರಹೋಗುವ ವೆಚ್ಚವೆಲ್ಲವನ್ನು ನೀವೇ ವಹಿಸಬೇಕು. ತಿಳಿಯುವುದು.

೦ ೦ ೦ ೦

ಚೇರಮನ್............ಬ್ಯಾಂಕ; ಕೂಳೂರು.

---

ಯಾರಿಂದ: ಸೆಕ್ರೆಟರಿ, ಡ್ರಾಮಾಟಿಕ್ ಅಸೋಸಿಯೇಶನ್,

ಕರ್ನಾಟಕ ಕಾಲೇಜ, ಧಾರವಾಡ.

ವಿಷಯ: ಬಡವಿದ್ಯಾರ್ಥಿಗಳ ಸಹಾಯಧನದ ಸಲುವಾಗಿ ಪ್ರಯೋಗಿಸಲಿರುವ ವಿವಿಧ ಮನೋರಂಜನಗಳಿಗೆ 'ಮನೋರಂಜನಕರ' (Entertainment Tax) ವನ್ನು ಹಾಕಬಾರದು.

ಕಲೆಕ್ಟರ, ಜಿಲ್ಲಾ ಧಾರವಾಡ,

ಧಾರವಾಡ ಇವರಿಗೆ—

ಕೆಳಕೆ ಅಂಕಿತವನ್ನಿಟ್ಟವರ ಬೇಡಿಕೆಯೇನೆಂದರೆ—

ಮಾನ್ಯರೇ, ಕಳೆದ ಆರು ವರ್ಷಗಳಿಂದಲೂ ನಮ್ಮ ಕಾಲೇಜಿನಲ್ಲಿ ಡ್ರಾಮಾಟಿಕ್ ಅಸೋಸಿಯೇಶನ್ ಸ್ಥಾಪಿತವಾಗಿದೆ. ಆಗಿನಿಂದ ಪ್ರತಿವರುಷವೂ ನಾಟಕ ವಿವಿಧ ವಿನೋದಾವಳಿಗಳ ಪ್ರಯೋಗಗಳನ್ನು ಸಾರ್ವಜನಿಕವಾಗಿ ಏರ್ಪಡಿಸುತ್ತೇವೆ; ಅವುಗಳಿಗೆ ಪ್ರತಿಫಲವಾಗಿ ಸಾರ್ವಜನಿಕ ಸದ್ಗೃಹಸ್ಥರಿಂದ ಸಾಹಾಯ್ಯ ಧನವನ್ನು ಪಡೆಯುತ್ತೇವೆ. ಅದನ್ನು ಬಡವಿದ್ಯಾರ್ಥಿಗಳಿಗೆ ಸಾಲದ ರೂಪದಿಂದಲೋ ಸಾಹಾಯ್ಯಧನ ರೂಪದಿಂದಲೋ ಕೊಡುತ್ತೇವೆ. ಅವರ ಶಿಕ್ಷಣ ಸರಾಗವಾಗಿ ಮುಂದುವರಿಯುವಂತೆ ಮಾಡುತ್ತೇವೆ. ನಮ್ಮಲ್ಲಿ ಪ್ರತಿವರುಷ ಹತ್ತಿಪ್ಪತ್ತು ಜನ ವಿದ್ಯಾರ್ಥಿಗಳಿಗಾದರೂ ಈ ಶಿಕ್ಷಣ ಸೌಕರ್ಯ ಮುಟ್ಟುತ್ತಲಿದೆ.

ಪ್ರತಿವರ್ಷದಂತೆ, ಈ ಸಲವೂ ಧಾರವಾಡ ವಿಜಯ ಥಿಯೇಟರಿನಲ್ಲಿ ದಿನಾಂಕ........ ಬೆಳಗಿನ ೯ ಗಂಟೆಗೆ ನಾಟಕ ಮತ್ತು ವಿವಿಧ ವಿನೋದಾವಳಿಗಳ ಪ್ರಯೋಗಗಳನ್ನು ಏರ್ಪಡಿಸಿದ್ದೇವೆ. ಈ ಬಗೆಗೆ ಸಾರ್ವಜನಿಕರಿಂದ ಸಾಹಾಯ್ಯಧನವನ್ನೂ ಸಂಗ್ರಹಿಸಲಿದ್ದೇವೆ.

ಈಗ ತಮ್ಮಲ್ಲಿ ವಿನಂತಿಯೇನೆಂದರೆ— ಈ ಪ್ರಯೋಗಗಳು ಯಾವನೊಬ್ಬ ವ್ಯಕ್ತಿಗಾಗಲಿ, ವ್ಯಕ್ತಿ ಹಿತಕ್ಕಾಗಲಿ ಸಂಬಂಧಪಟ್ಟುವಲ್ಲ. ಕೇವಲ ಬಡವಿದ್ಯಾರ್ಥಿಗಳ ಶಿಕ್ಷಣ ಸೌಕರ್ಯಕ್ಕಾಗಿ ನಡೆಯಲಿವೆ. ಆದುದರಿಂದ, ಈ ಪ್ರಯೋಗಗಳಿಗೆ ಮನೋರಂಜನಕರ (Entertainment Tax) ತೆಗೆದುಕೊಳ್ಳಬಾರದಾಗಿ ಬೇಡುವೆವು.

ಈ ಉದಾರಕೃತಿಗೆ ತಮಗೆ ಎಂದೆಂದಿಗೂ ಋಣಿಯಾಗಿರುವ,

ಧಾರವಾಡ. ತಮ್ಮ ವಿಶ್ವಾಸದ

೧೫–೨–೫೫ × × × ×

ಸೆಕ್ರೆಟರಿ, ಡ್ರಾ ಅ. ಕ. ಕಾ.

---

## ಕಲೆಕ್ಟರರಿಂದ ಉತ್ತರ

ಜಾ ನಂ. ..................................

ದಿ.................................

ಸೆಕ್ರೆಟರಿ, ಡ್ರಾಮಾಟಿಕ್ ಅಸೋಸಿಯೇಶನ್, ಕರ್ನಾಟಕ

ಕಾಲೇಜ ಧಾರವಾಡ, ಇವರಿಗೆ—

ನಮ್ಮ ಕಚೇರಿಯಿಂದ ತಿಳಿಸುವುದೇನಂದರೆ— ನಿಮ್ಮ ದಿ.....................ನೆಯ ಅರ್ಜಿ ಮುಟ್ಟಿದೆ. ನಿಮ್ಮ ಸ್ತುತ್ಯ ಉಪಕ್ರಮಕ್ಕಾಗಿ ಧನ್ಯವಾದಗಳು. ಈ ಉದಾರ ಕಾರ್ಯದಲ್ಲಿ ನಮ್ಮಿಂದಾದಷ್ಟು ಸಾಹಾಯ್ಯವನ್ನು ಮಾಡುವ ಇಚ್ಛೆಯಿದೆ.

ದಿ....ರಂದು ನಮ್ಮ ಕಚೇರಿಯ ಅಕೌಂಟಂಟರು ನಿಮ್ಮನ್ನು ಕಾಣುವರು. ಆಗ ನೀವು ನಿಮ್ಮ ಸಂಸ್ಥೆಯ ಆಯವ್ಯಯಗಳ ವರದಿಯನ್ನು ಅವರಿಗೆ ತೋರಿಸುವಿರೆಂದು ಆಶಿಸಿದ್ದೇವೆ.

ತಮ್ಮ ನಂಬುಗೆಯ

ಕಲೆಕ್ಟರ, ಜಿಲ್ಹಾ ಧಾರವಾಡ.

---

ಯಾರಿಂದ: ............ವ್ಯಾಪಾರ ವರ್ಧಕ ಸಂಘದ ಚೇರಮನ್‌ರಿಂದ.

ವಿಷಯ: ನಮ್ಮ ಊರಿಗೆ ಸಂಜೆಯ ಟಪಾಲು ಸಿಕ್ಕದಿದ್ದುದರಿಂದ ವ್ಯಾಪಾರಕ್ಕೆ ಬಹಳ ಅಡೆತಡೆಯಾಗುತ್ತಿದೆ. ವ್ಯಾಪಾರಿಗಳಿಗೆ ವಿಂಡೋಡೆಲಿವರಿ (Window Delivery) ಯನ್ನಾದರೂ ಕೊಡುವ ವ್ಯವಸ್ಥೆಯಾಗಬೇಕು.

ಪೋಸ್ಟಲ್ ಸೂಪರಿಟೆಂಡೆಂಟ, ಜಿಲ್ಹಾ ಕಾರವಾರ,

ಕಾರವಾರ ಇವರಿಗೆ—

...................ವ್ಯಾಪಾರ ವರ್ಧಕ ಸಂಘದ ಚೇರಮನ್ನನ ವಿನಂತಿಯೇನೆಂದರೆ— ನಮ್ಮ............ಊರು ಒಳಮಲೆನಾಡಿನಲ್ಲಿ ಒಳ್ಳೆ ಪಡಿಮೂಲೆಯ ಸ್ಥಳವಾಗಿದೆ. ಇಲ್ಲಿ ಅಡಕೆ, ಮೆಣಸುಗಳ ದೊಡ್ಡ ದೊಡ್ಡ ಅಡತಿ ಅಂಗಡಿಗಳು ಮುವ್ವತ್ತು ನಾಲ್ವತ್ತಕ್ಕೆ ಮಿಕ್ಕಿವೆ. ಬೇರೆ ಬೇರೆ ವ್ಯಾಪಾರದ ಸಾಧಾರಣ ತರಗತಿಯ ಅಂಗಡಿಗಳಿಗಂತೂ ಲೆಕ್ಕವೇ ಇಲ್ಲ. ಅಲ್ಲದೆ, ಕಾರವಾರ ಜಿಲ್ಹೆಯ ನಾಲ್ಕೂ ನಿಟ್ಟುಗಳಿಗೆ ಹೋಗುವುದಕ್ಕೆ ಅನುಕೂಲವಾದ ಕೇಂದ್ರವಾಗಿದೆ ಈ ಊರು. ಅದರಿಂದ ದಿನದಿನಕ್ಕೂ ವ್ಯಾಪಾರ ಬೆಳೆಯುತ್ತಲಿದೆ.

ಆದರೆ ನಮ್ಮ ಊರಿಗೆ ರೈಲಿನ ಅನುಕೂಲತೆಯಿಲ್ಲ. ಆದುದರಿಂದ ನಿತ್ಯವೂ ಮೋಟರ ಮೇಲೆಯೇ ನಮಗೆ ಟಪಾಲು ಸಿಕ್ಕುವುದು ಅನಿವಾರ್ಯವಾಗಿದೆ. ಈ ಸಂಗತಿಯನ್ನು ನಾವು ಬಲ್ಲೆವಾದರೂ ನಮ್ಮ ವ್ಯಾಪಾರ ವರ್ಧನೆಯ ದೃಷ್ಟಿಯಿಂದ ವರಿಷ್ಠರಾದ ತಮ್ಮಲ್ಲಿ ಬೇಡಿಕೆ ಯೊಂದನ್ನು ಇಡಲೇಬೇಕಾಗಿದೆ.

ಟಪಾಲು ಮೋಟರು ನಮ್ಮ ಊರಿಗೆ ಸಂಜೆಯ ೬ ಗಂಟೆಯ ಮೇಲೆ ಮುಟ್ಟುವುದು. ಅಷ್ಟು ಹೊತ್ತಿಗೆ ಅಂಚೆಕಟ್ಟೆ ಮುಚ್ಚಿರುತ್ತಿದೆ. ಮರುದಿನ ಬೆಳಗಿಗೆ ನಮ್ಮಲ್ಲಿಂದ ಟಪಾಲು ಕಳಿಸಿದ ಮೇಲೆ ಊರಲ್ಲಿ ಹಿಂದಿನ ದಿನದ ಟಪಾಲು ಹಂಚುವ ರೂಢಿ. ಈ ವ್ಯವಸ್ಥೆಯಿಂದ ವ್ಯಾಪಾರಿಗಳಿಗೆ ಒಂದು ದಿನದ ವ್ಯವಹಾರ ಹಿಂದೆ ಬಿದ್ದಂತಾಗುತ್ತಿದೆ. ಈ ಪೈಪೋಟಿಯ ದಿವಸ ಗಳಲ್ಲಿ ಗಳಿಗೆಗೊಮ್ಮೆ ಗಂಡಾಂತರ ಬರುವುದೂ ಉಂಟು ವ್ಯಾಪಾರಿಗಳಿಗೆ. ಎಂದಮೇಲೆ ಒಂದು ದಿವಸದ ವ್ಯಾಪಾರ ಹಿಂದೆ ಬಿದ್ದರೆ ನಮ್ಮ ಗತಿಯೇನು ?

ಆದುದರಿಂದ, ಕೊನೆಯದಾಗಿ ತಮ್ಮಲ್ಲಿ ಬೇಡುವುದೆಂದರೆ—ವರಿಷ್ಠರು ನಮ್ಮ ಅನುವು ಆಪತ್ತುಗಳನ್ನು ಸಮಾಲೋಚಿಸಿ ನೋಡಬೇಕು. ಬೇಕಿದ್ದರೆ ಸ್ಥಾನಿಕ ವಿಚಾರಣೆ ನಡೆಸುವು ದಕ್ಕೂ ನಮ್ಮ ಒಪ್ಪಿಗೆಯಿದೆ. ವಿಚಾರಾಂತ್ಯದಲ್ಲಿ ನಮ್ಮ ಬೇಡಿಕೆ ನಿಜವೆಂದು ಕಂಡು ಬಂದರೆ............

೧ ಸಂಜೆಯ ಟಪಾಲು ಇನ್ನಷ್ಟು ಬೇಗನೆ ಬರಬೇಕು; ಮತ್ತು ಸಂಜೆಯೊಳಗಾ ಗಿಯೇ ಹಂಚಿಕೆಯ ವ್ಯವಸ್ಥೆಯಾಗಬೇಕು. ಇದರಿಂದ ಅದೇ ರಾತ್ರಿಯೇ ಪತ್ರಗಳಿಗೆ ಉತ್ತರವನ್ನು ಬರೆಯಲು ಅನುಕೂಲವಾಗುವುದು.

೨. ಇದು ಸಾಧ್ಯವೇ ಇಲ್ಲವಾದರೆ, ವ್ಯಾಪಾರಿಗಳಿಗೂ ಅವಶ್ಯವಿದ್ದವರಿಗೂ ಕಿಟಕಿಯ ಹಂಚಿಕೆ ( Window Delivery ) ದೊರೆಯುವಂತೆ ವ್ಯವಸ್ಥೆಯಾಗಬೇಕು.

೩. ನಾವು ಕೊಟ್ಟ ಪ್ರತ್ಯುತ್ತರಗಳು ಬೆಳಗಿನ ಟಪಾಲ ಗಾಡಿಗೇ ಹೊರಡುವಂತೆ, ೭ ಗಂಟೆಗೆ ಅಂಚೆಯನ್ನು ಕಟ್ಟುವ ವ್ಯವಸ್ಥೆಯಾಗಬೇಕು.

ಬೇಡಿಕೆಗೆ ಮನ್ನಣೆ ದೊರೆತು, ಆದಷ್ಟು ತೀವ್ರ ಈ ವ್ಯವಸ್ಥೆಯಾದೀತೆಂದು ಆಶಿಸಿರುವ,

ತಮ್ಮ ವಿಶ್ವಸ್ತ

ದಿ............... × × × ×

ಚೇರಮನ್ ವ್ಯಾಪಾರ ವರ್ಧಕ ಸಂಘ.

---

ಪೋಸ್ಟಲ್ ಸೂಪರಿಂಟೆಂಡೆಂಟರ ಉತ್ತರ

ಜಾ. ನಂ

ದಿ.........................

ಚೇರಮನ್, ವ್ಯಾಪಾರ ವರ್ಧಕ ಸಂಘ...............

ಇವರಿಗೆ—

ತಿಳಿಸುವುದೇನೆಂದರೆ— ನಿಮ್ಮ ದಿ. ............ನೆಯ ಬೇಡಿಕೆ ಮುಟ್ಟಿದೆ. ಆ ಬಗೆಗೆ ವಿಚಾರವನ್ನು ನಡೆಸಿರುವೆವು. ಸಂಬಂಧಪಟ್ಟ ಆಡಳಿತಗಾರರಿಂದ ಉತ್ತರ ಬರಬೇಕು. ಆಮೇಲೆ ನಿಮ್ಮಲ್ಲಿಗೆ ಸ್ಥಾನಿಕ ವಿಚಾರಣೆಗೆ ಬರುವೆವು. ಆ ದಿನವನ್ನು ಮೊದಲೇ ನಿಮಗೆ ತಿಳಿಸಲಾಗುವುದು.

ತಮ್ಮ ವಿಶ್ವಾಸದ

× × × ×

ಸೂಪರಿಂಟೆಂಡೆಂಟ ಆಫ್ ಪೋಸ್ಟ್

---

## (೩) ಕಚೇರಿಯ ಕಾಗದ-ಪತ್ರಗಳು

ಯಾರಿಂದ: ............ಬ್ಯಾಂಕ; ಬ್ರ್ಯಾಂಚ ಆಫೀಸ............ ಇವರಿಂದ.

ವಿಷಯ: ಈಗಿರುವ ಕಚೇರಿಯ ಕಟ್ಟಡವನ್ನು ಹೊಸ ಮಾರ್ಕೆಟ್ಟಿಗೆ ಬದಲಿಸುವುದು ಅವಶ್ಯವಾಗಿದೆ. ಒಪ್ಪಿಗೆಯನ್ನು ಕೊಡಬೇಕು

ಜಾ. ನಂ...................

ದಿ...........................

ಡೈರೆಕ್ಟರ..............ಬ್ಯಾಂಕ ಲಿಮಿಟೆಡ್,

................ಇವರಿಗೆ—

............ಬ್ಯಾಂಕ ಬ್ರ್ಯಾಂಚ ಆಫೀಸ ಮ್ಯಾನೇಜರನ ವಿನಂತಿ. ನಮ್ಮ ಸಂಸ್ಥೆಯ ಕಚೇರಿ ...........ಪೇಟೆಯಲ್ಲಿರುತ್ತಿದ್ದು ೧೫ ವರುಷಗಳು ಕಳೆದುವು. ಆ ಪೇಟೆ ಮುಖ್ಯ

ಮಾರ್ಕೆಟಾಗಿರುವ ವರೆಗೂ ನಮ್ಮ ಸಂಸ್ಥೆಯ ವ್ಯಾಪಾರ ಎಲ್ಲರಿಗೂ ಅನುಕೂಲವಾಗಿತ್ತು, ನಮಗೂ ಲಾಭದಾಯಕವಾಗಿತ್ತು.

ಈಗೆರಡು ವರುಷಗಳಿಂದ ನಗರಸಭೆಯವರು ಬೇರೆ ಕಡೆಗೆ ಹೊಸಮಾರ್ಕೆಟ ಮಾಡಿದ್ದಾರೆ. ದೊಡ್ಡ ದೊಡ್ಡ ವ್ಯಾಪಾರಿಗಳೆಲ್ಲ ಅಲ್ಲಿಯೇ ತಮ್ಮ ವಖಾರವನ್ನು ಮಾಡಿಕೊಂಡಿದ್ದಾರೆ. ಅವರಿಗೆ ನಮ್ಮ ಬ್ಯಾಂಕವರೆಗೂ ಬರುವುದೂ ಹೋಗುವುದೂ ವ್ಯರ್ಥ ವೇಳೆಯನ್ನು ಕಳೆದಂತೆ ಎಂದು ಎನಿಸತೊಡಗಿದೆ.

ಅಲ್ಲದೆ, ಹೊಸ ಮಾರ್ಕೆಟಿನಲ್ಲಿಯೇ ಎರಡು ಬ್ಯಾಂಕುಗಳು ತಳವೂರಿವೆ; ಅವು ನಮ್ಮೊಡನೆ ಸ್ಪೈರ್ಧೆಯನ್ನು ನಡೆಸಿ ಗಿರಾಕಿಗಳನ್ನೆಲ್ಲ ಅತ್ತ ಎಳೆಯುತ್ತಲಿವೆ.

ಇಷ್ಟಾದರೂ ವ್ಯಾಪಾರಸ್ಥರು ನಮ್ಮ ಸಂಸ್ಥೆಯಲ್ಲಿ ನಂಬಿಗೆಯನ್ನು ಇಟ್ಟುಕೊಂಡಿದ್ದಾರೆ; ಮತ್ತು ನಮ್ಮ ಕಚೇರಿಯನ್ನೂ ಅಲ್ಲಿಗೇ ಸಾಗಿಸಲು ಸಲಹೆಕೊಡುತ್ತಿದ್ದಾರೆ. ಈಗಲೇ ಪ್ರಯತ್ನಿಸಿದರೆ ಅಲ್ಲಿ ನಮಗೆ ತಕ್ಕ ಕಟ್ಟಡಗಳು ದೊರೆಯುವಂತೆ ಇವೆ; ಆಮೇಲೆ ವ್ಯಾಪಾರವೂ ಬೆಳೆಯುವಂತೆ ಇದೆ.

ಇದ್ದ ಸಂಗತಿಯನ್ನು ವರಿಷ್ಠರಿಗೆ ಅರಿಕೆಮಾಡಿಕೊಂಡಿದ್ದೇನೆ. ಅವಲೋಕನವಾಗಿ ಅಪ್ಪಣೆಯನ್ನು ಕೊಟ್ಟರೆ, ಹೊಸ ಕಟ್ಟಡವನ್ನು ಹುಡುಕುವೆ. ತೀವ್ರ ಉತ್ತರ ದೊರೆಯಬೇಕಾಗಿ ಬೇಡುವೆ.

ತಮ್ಮ ವಿಧೇಯ

... ....ಬ್ಯಾಂಕ, ಬ್ರ್ಯಾಂಚ ಆಫೀಸ........

---

## ಉತ್ತರ

ಜಾ. ನಂ............

ದಿ. ...............

ಮ್ಯಾನೇಜರ........ಬ್ಯಾಂಕ, ಬ್ರ್ಯಾಂಚ ಆಫೀಸ........

...............ಇವರಿಗೆ—

ತಿಳಿಸುವುದೇನೆಂದರೆ: ನಿಮ್ಮ ಕಾಗದ ಕೈಸೇರಿದೆ. ಈಗ ನಿಮಗೆ ಸಿಕ್ಕಬಹುದಾದ ಹೊಸಕಟ್ಟಡದ ನಕಾಶ, ಅದಕ್ಕೆ ತೆರಬೇಕಾದ ಬಾಡಿಗೆ, ಎಷ್ಟು ವರ್ಷ ಸಿಕ್ಕಬಹುದು, ಅದರಲ್ಲಿ ನಮಗೆ ಬೇಕಾಗುವ ಅನುಕೂಲತೆಗಳನ್ನು ಮಾಡಿಕೊಡಲು ಒಡೆಯರು ಒಪ್ಪುವರೇ—ಈ ಮುಂತಾದ ಅಂಶಗಳನ್ನು ಬೇಗನೆ ನಮಗೆ ತಿಳಿಸಿರಿ. ಇವೆಲ್ಲವೂ ನಮಗೆ ಅನುಕೂಲವಾಗುವುವೆಂದು ಕಂಡುಬಂದರೆ, ಕೆಲವು ಮುಂಗಡ ಹಣವನ್ನು ಕೊಟ್ಟು ಕಾಗದ ಪತ್ರಗಳನ್ನು ಮಾಡಿಕೊಳ್ಳುವುದಕ್ಕೂ ನಮ್ಮ ಒಪ್ಪಿಗೆಯಿದೆ.

..................

ಡೈರೆಕ್ಟರ...............ಬ್ಯಾಂಕ...........

**ತಿಳಿವಳಿಕೆ:** ಅರ್ಜಿಗಳನ್ನೂ ಕಾಗದಪತ್ರಗಳನ್ನೂ ಬರೆಯುವ ಬಗೆಗೆ ಈ ಮೊದಲೇ ರೂಢಿಯಾಗಿದೆ. ಅದೇ ಧಾಟಿಯಲ್ಲಿ ಮುಂದುವರಿದ ಕೆಲವು ಮಾದರಿಗಳನ್ನು ಇಲ್ಲಿ ತೋರಿಸಿದೆ. ರೂಢಿ ಮಾಡಿಕೊಳ್ಳಿರಿ.

## — ಬಳಕೆ ಮತ್ತು ಕೇಳಿಕೆ —

೧. ಕೆಳಗಿನ ಸಂಗತಿಗಳನ್ನು ಕುರಿತು ವೃತ್ತಪತ್ರಗಳಿಗೆ ಸ್ವಲ್ಪದರಲ್ಲಿ ಬರೆಯಿರಿ. ನಿಮ್ಮಲ್ಲಿ ಸಾರ್ವಜನಿಕ ವಾಚನಾಲಯವನ್ನು ಸ್ಥಾಪಿಸುವ ಸಭೆಯಾಗಿದೆ. ಪ್ರೌಢಮಂತದಾನ ಪದ್ಧತಿಯ ಒಳಿತು ಕೆಡಕುಗಳನ್ನು ಕುರಿತು ಚರ್ಚಾಕೂಟ ನಡೆದಿದೆ.
ಹೊಸ ಮೋಟರಸ್ಟ್ಯಾಂಡ ಊರಿಂದ ದೂರವಿರುವ ಕಾರಣ ಪ್ರವಾಸಿಗಳಿಗಾಗುವ ಅನಾನುಕೂಲತೆಗಳನ್ನು ವಿಮರ್ಶಿಸಿರಿ.
ನಿಮ್ಮ ಊರ ಸಾರ್ವಜನಿಕ ಉಪವನವನ್ನು ಸುಧಾರಣೆಮಾಡುವ ಅವಶ್ಯಕತೆಯನ್ನು ಕುರಿತು ದೂರನ್ನು ಬರೆಯಿರಿ.
ನಿಮ್ಮೂರ ರೈಲುನಿಲ್ದಾಣದಲ್ಲಿರುವ ಉಪಾಹಾರಗೃಹದ ಅವ್ಯವಸ್ಥೆಯನ್ನು ಸರಿಪಡಿಸುವ ಕುರಿತು ದೂರುಕೊಡಿರಿ.

೨. ನಿಮ್ಮ ಮಡಿಕಟ್ಟಿನ ಹೊಲದಲ್ಲಿ ಬಾವಿ ತೆಗೆಯಿಸುವುದರಿಂದ ನಿಮಗೂ, ಅಧಿಕ ಆಹಾರವನ್ನು ಬೆಳೆಯುವ ಆಂದೋಲನಕ್ಕೂ ಆಗುವ ಅನುಕೂಲತೆಗಳನ್ನು ವಿವರಿಸಿ ಸರಕಾರದಿಂದ ತಗಾಯಿ ಸಾಲವನ್ನು ಕೇಳಿರಿ.

೩. ನೀವು ಡಿ. ಎ. ಇ. ರೆಂದು ತಿಳಿದು, ಗ್ರುಪ್ ಶಿಕ್ಷಣ ಸಮ್ಮೇಲವನ್ನು ಕರೆಯಲು ನಿಮ್ಮ ಅಸಿಸ್ಟಂಟರಿಗೆ ತಿಳಿಸಿರಿ.

೪. ನೀವು ಬ್ರ್ಯಾಂಚ ಆಫೀಸಿನ ಮ್ಯಾನೇಜರರೆಂದು ತಿಳಿದು ನಿಮ್ಮ ಬ್ಯಾಂಕಿನಲ್ಲಾದ ಕಳವಿನ ವಿವರಗಳನ್ನು ಹೆಡ್ ಆಫೀಸಿಗೆ ತಿಳಿಸಿರಿ.

# ೭. ಪ್ರಬಂಧಗಳು

## (ಅ) ವರ್ಣನಪರ ನಿಬಂಧಗಳು

### ಅಂಚೆಯಾಳು

**ಮುಖ್ಯ ಮಾತುಗಳು:** ಮೊದಲುಮಾತು — ವೇಷ ಭೂಷಣಗಳು — ಕೆಲಸದ ರೀತಿ ನೀತಿ – ಸಮಾಜಕ್ಕೆ ಉಪಯೋಗ — ಆತನ ಸ್ಥಿತಿಗತಿ — ಮುಗಿತಾಯ.

ಅಂಚೆಯಾಳು, ಅಚ್ಚಗನ್ನಡದಲ್ಲಿ ಅರ್ಥವಾಗಲಿಕ್ಕಿಲ್ಲ. ಆತನನ್ನೇ "ಪೋಸ್ಟಮನ್" ಎಂದು ಹೇಳಿದರೆ ತಿಳಿಯಬಹುದು. ಅಲ್ಲವೇ ? ಎಲ್ಲರೂ ಈತನ ಬರವನ್ನು ಆತುರದಿಂದ ನಿರೀಕ್ಷಿಸುವರು; ಆದರೆ ಯಾರಿಂದಲೂ ಈತನಿಗೆ ಸುಸ್ವಾಗತವಿಲ್ಲ; ಈತ ಅದನ್ನು ಬಯಸುವುದೂ ಇಲ್ಲ. "ಕರ್ಮಣ್ಯೇವಾಧಿಕಾರಸ್ತೇ, ಮಾಫಲೇಷು ಕದಾಚನ" ದುಡಿತ ಈತನದು.

ಅಂಚೆಯಾಳು ಪಟ್ಟಣಗಳಲ್ಲಿಯೂ ಹಳ್ಳಿಗಳಲ್ಲಿಯೂ ಎಲ್ಲರಿಗೂ ಗೊತ್ತಿದ್ದವ. ತಲೆಯ ಮೇಲೆ ಖಾಕಿಯ ಪಟಕಾ ಇಲ್ಲವೆ ಟೊಪ್ಪಿಗೆ, ಮೈಮೇಲೆ ಖಾಕಿಯ ಕೋಟು, ಖಾಕಿಯ ಚೊಣ್ಣ, ಬಗಲಲ್ಲಿ ನೇತಾಡುವ ಚರ್ಮದ ಚೀಲ, ಕೈಯಲ್ಲಿ ಕಾಗದ–ಪತ್ರಗಳ ಕಟ್ಟು ಇವೆಲ್ಲ ಆತನ ಹೆಗ್ಗುರುತುಗಳು ಈ ವಿಶಿಷ್ಟ ವ್ಯಕ್ತಿತ್ವವನ್ನು ಯಾರೂ ತಟ್ಟನೆ ಗುರುತಿಸಬಲ್ಲರು.

ಅಂಚೆಯಾಳಿನ ಕೆಲಸ ಹಿರಿಯ ಹೊಣೆಗಾರಿಕೆಯುಳ್ಳದು, ಕಡು ಕಷ್ಟತರವಾದುದು. ದೇಶದಾದ್ಯಂತವೂ ಮಾನವಮಾನವರಲ್ಲಿ ಸಂಬಂಧವನ್ನು ಬೆಳೆಸುವ ಸಂಪರ್ಕ ಸೂತ್ರ ವಿದ್ದಂತೆ ಈ ವ್ಯಕ್ತಿ. ಈ ಹೊಣೆಗಾರಿಕೆ ಹಸನಾಗಿ ಸಾಗಿದಂತೆಲ್ಲ ನಾಡಿನಲ್ಲಿ ನೆಮ್ಮದಿಯುಳಿಯುವುದು. ಸ್ವಲ್ಪವೇ ಆಲಸ್ಯ ಅಲಕ್ಷ್ಯಗಳಾದರೂ ಸಮಾಜದ – ಅಷ್ಟೇಕೆ ರಾಷ್ಟ್ರದ – ಗಾಡಿಯ ಗತಿ ಹೊಯ್ದಾಡತೊಡಗುವುದು. ಅದಕ್ಕಾಗಿ ಈತನು ಬೆಟ್ಟ ಬೇಸಗೆಯ ಬೆಂಕಿಯಲ್ಲಿಯೂ ಮೈ ಕೊರೆಯುವ ಚಳಿಯಲ್ಲಿಯೂ ಮುಸಲಧಾರೆಯಾಗಿ ಸುರಿಯುವ ಮಳೆಯಲ್ಲಿಯೂ ಮನೆಯಿಂದ ಮನೆಗೆ ಸಮಯಕ್ಕೆ ಸರಿಯಾಗಿ ಅಲೆದಾಡಲೇ ಬೇಕಾಗುವ ಕರ್ಮಯೋಗಿ!

ಕೇವಲ ಪತ್ರಗಳನ್ನು ಹಂಚುವದಷ್ಟೇ ಅಂಚೆಯಾಳಿನ ಕೆಲಸವಲ್ಲ. ಆತನ ಚರ್ಮದ ಚೀಲದಲ್ಲಿ ರಿಜಿಸ್ಟರ್ಡ ಪತ್ರಗಳು, ಮನಿಆರ್ಡರುಗಳು, ಇನ್ಸುಅರ್ಡ ಪಾಕೀಟುಗಳು, ಸಣ್ಣ ದೊಡ್ಡ ಪಾರ್ಸಲುಗಳು, ನಾಟ್‌ಪೇಡ ಪತ್ರಗಳು ಮುಂತಾಗಿ ಹಣದ ಹೊಣೆಗಾರಿಕೆಯ ವಸ್ತುಗಳಿರುತ್ತಿವೆ. ಅವೆಲ್ಲವುಗಳನ್ನು ಒಡೆಯರಿಗೆ ಸರಿಯಾಗಿ ಮುಟ್ಟಿಸುವುದೂ ಅವರಿಂದ ಅಂಕಿತ (ಸಹಿ) ಗಳನ್ನು ಪಡೆಯುವುದೂ ಹಿರಿಯ ಹೊಣೆಗಾರಿಕೆ. ಅಪರಿಚಿತರ ಬಗೆಗೆ ಸಾಕ್ಷ್ಯಗಳನ್ನೂ ತೆಗೆದುಕೊಳ್ಳುತ್ತಾನೆ ಅಂಚೆಯಾಳು.

ಇಷ್ಟು ಹೊಣೆಗಾರಿಕೆಯಿದ್ದರೂ ಆ ಕಾಗದ–ಪತ್ರಗಳ ಸುಖದುಃಖಗಳಿಂದ ನಿರ್ಲಿಪ್ತನವನು ಸತ್ತವರಿಗಾಗಿ ಅತ್ತು ಕರೆಯುವವರು ಯಾರೋ! ಹೆತ್ತವರಿಗಾಗಿ ತೊಟ್ಟಿಲ ಕಟ್ಟುವವರು ಯಾರೋ! ಮದುಮಕ್ಕಳಿಗಾಗಿ ಮಂಟಪ ಕಟ್ಟುವವರು ಯಾರೋ! ಎಲ್ಲರ ಪತ್ರಗಳನ್ನು ನಿರ್ವಿಕಾರ ಚಿತ್ತದಿಂದ ಮುಟ್ಟಿಸುವುದೊಂದೇ ಈತನ ಕೆಲಸ. ಧನಿಕರೂ ದರಿದ್ರರೂ ಎಲ್ಲರೂ ಒಂದೇ ಈ ಸಾಮ್ಯವಾದಿಗೆ!

ಇಂತಹ ನಿಸ್ಸೀಮ ಕರ್ತವ್ಯದಕ್ಷನಿಗೆ ಸಂಬಳ ಮಾತ್ರ ಹೇಳಿಕೊಳ್ಳುವಂತಹದಿಲ್ಲ. ಆದರೂ ಆತನು ತನ್ನ ಕರ್ತವ್ಯವನ್ನು ಕಡೆಗಣಿಸುವುದಿಲ್ಲ. ಈ ರೀತಿಯಲ್ಲಿ, ಸಮಾಜಕ್ಕೆ ಸರ್ವಾತ್ಮನಾ ಸದುಪಯೋಗದ ವ್ಯಕ್ತಿಯೆಂದರೆ, ಅಂಚೆಯಾಳನ್ನೇ ಬೆರಳುಮಾಡಿ ತೋರಿಸಬಹುದು.

## ಮುಖ್ಯ ಮಾತುಗಳ ಮನವರಿಕೆ

### ಹತ್ತಿ

**ಮೊದಲಮಾತು:** ಮಾನವನ ಬಾಳು ಬೆಡಗುಗಳಿಗೆ ಬಟ್ಟೆಗಳು ಬೇಕು. ಬಟ್ಟೆಗಳು — ಹತ್ತಿ, ಉಣ್ಣೆ, ರೇಶ್ಮೆಗಳಿಂದಾಗುವುವು. ಹತ್ತಿಯ ಬಟ್ಟೆಗಳೇ ಹೆಚ್ಚು.

**ಹತ್ತಿಯು ಬೆಳೆಯು ಆಕಾರ:** ಅನುಕೂಲತೆಗಳು– ಕರಿಯ ಬಯಲು ನೆಲ, ಒಣ ಹವೆ, ಹುಲುಸಾಗಿ ಗೊಬ್ಬರ ಬೇಕು. ಸಾಮಾನ್ಯವಾಗಿ, ಬೆಳೆಯು ಎತ್ತರ ೨–೩ ಫೂಟು. ಗುಂಪಾಗಿ ಬೆಳೆಯುವುದು. ಕೆಲವು ಮರಗಳ ರೂಪದಲ್ಲಿಯೂ ಉಂಟು.

**ಬೆಳೆಯು ಬಣ್ಣನೆ, ಫಲಪ್ರಾಪ್ತಿ:** ಕಾಯಾಗುವುದು, ಕಾಯಿ ಬಿರಿಯುವುದು, ಹತ್ತಿಯನ್ನು ಬಿಡಿಸುವುದು, ಬಿಳಿ ಹತ್ತಿಯ ಒಳಗೆ ಕರಿಯ ಬೀಜಗಳು.

**ಹತ್ತಿಯಲ್ಲಿ ಬಗೆಗಳು, ಬೆಳೆಯುವ ಪ್ರದೇಶಗಳು:** ದೊಡ್ಡ ಹತ್ತಿ, ಸಣ್ಣ ಹತ್ತಿ, ಜಯವಂತ, ಲಕ್ಷ್ಮೀ ಮುಂತಾಗಿ. ಹತ್ತಿ ಅರಳೆಯಿಂದ ಉದ್ದವಾದ ಎಳೆ ಹೊರಟಂತೆಲ್ಲ ಅದರ ಬೆಲೆ ಹೆಚ್ಚು. ಕಾನಡಾ, ಇಜಿಪ್ತ, ಭಾರತಗಳಲ್ಲಿ ಬೆಳೆ ಹೆಚ್ಚು.

**ಹತ್ತಿಯು ಉಪಯೋಗ:** ಗಿರಣಿ, ಕೈಮಗ್ಗಗಳಲ್ಲಿ ಹತ್ತಿಯನ್ನು ಅರೆದು, ನೂಲು ಮಾಡಿ ಬಗೆಬಗೆಯ ಬಟ್ಟೆಗಳನ್ನು ನೇಯುವುದು, ಹಗ್ಗ ಮಾಡುವುದು, ಗಾದಿ–ಗಿರದೆಗಳಿಗೆ ಉಪಯೋಗ, ವೈದ್ಯಕೀಯ ಉಪಯೋಗ ಮುಂ.

**ಮುಗಿತಾಯ:** ಒಳ್ಳೆ ಉಪಯುಕ್ತವಾದ ವನಸ್ಪತಿ.

## ಮದುವೆಗಳು

**ಮುಮ್ಮಾತು—** ಮದುವೆಯೆಂದರೇನು?— ಸಮಾಜದ ಸುಸ್ಥಿತಿಗೆ ಅದರ ಆವಶ್ಯಕತೆಯೇನು?— ಹಿಂದು, ಮುಸಲ್ಮಾನ, ಕ್ರಿಶ್ಚನ್ ಲಗ್ನ ಪದ್ಧತಿಗಳು— ಮದುವೆಗಳಲ್ಲಿ ಆಗುತ್ತಿದ್ದ ಹಣದ ಅಪವ್ಯಯ ಮತ್ತು ಹುಚ್ಚಾಟಗಳು— ಈಗಾಗುತ್ತಲಿರುವ ಸುಧಾರಣೆ— ಮದುವೆಗಳ ಬಗೆಗೆ ಸರಕಾರದ ಶಾಸನಗಳು ಬೇಕೋ (ಚರ್ಚೆ) ಮುಗಿತಾಯ.

## ಭಾರತದಲ್ಲಿ ಸಾಧುಗಳು ಮತ್ತು ಫಕೀರರು

**ಮುಮ್ಮಾತು—** ಭಾರತದಲ್ಲಿ ಸಾಧು, ಫಕೀರರ ವಿಶಿಷ್ಟ ಪಂಗಡ— ಸಾಧು, ಫಕೀರರ ತುಲನಾತ್ಮಕ ಜೀವನ— ಅದರಿಂದ ಸಮಾಜಕ್ಕೆ ಲಾಭ–ಹಾನಿ— ಈಗಿನ ಸಾಧುಗಳ, ಫಕೀರರ ಹಾದಿ ಬಿಟ್ಟ ನಡತೆ— ಆ ಬಗೆಗೆ ಸರಕಾರ ಮತ್ತು ಸಾಮಾಜಿಕರ ಕರ್ತವ್ಯ— ಮುಗಿತಾಯ.

## ಸಾರ್ವಜನಿಕ ಉಪವನಗಳು

**ಮುಮ್ಮಾತು—** ದೈಹಿಕ ಮಾನಸಿಕ ಆನಂದಗಳಿಗೆ ಕಾರಣ— ಉಪವನಗಳೆಂದರೇನು?— ಮನೆ ಮುಂದೆ ಕೈದೋಟಗಳನ್ನು ರಚಿಸುವುದೇಕೆ?— ಸಾರ್ವಜನಿಕ ಉಪವನಗಳ ಆವಶ್ಯಕತೆ— ಅಲ್ಲಿರಬೇಕಾದ ಸೌಕರ್ಯಗಳು: ಆಸನಗಳು, ರೇಡಿಯೋ ಮುಂತಾಗಿ— ಉಪವನಗಳ ಪಾಲನ–ಪೋಷಣ— ಮುಗಿತಾಯ.

## ತೀರ್ಥಯಾತ್ರೆಗಳು

**ಮುಮ್ಮಾತು—** ಜ್ಞಾನಸಂಗ್ರಹದ ಸಾಧನಗಳಲ್ಲೊಂದು— ತೀರ್ಥಯಾತ್ರೆಯೆಂದರೇನು?— ಅವುಗಳ ಆವಶ್ಯಕತೆಯ ಬಗೆಗೆ ಭಾರತೀಯರ ಕಲ್ಪನೆ— ತೀರ್ಥ ಸ್ಥಳಗಳ

ಸುಂದರ ಸನ್ನಿವೇಶ — ಯಾತ್ರೆಯ ಕಾಲದ ಅನುಭವಗಳು: ಒಳಿತು ಮತ್ತು ಕೆಡಕು — ತೀರ್ಥಯಾತ್ರೆಗಳಿಂದಾಗುವ ಹೃದಯ ಬುದ್ಧಿಗಳ ವಿಕಾಸ — ನೀವು ಮಾಡಿದ ಒಂದು ಯಾತ್ರೆಯ ಸಂಕ್ಷಿಪ್ತ ವರ್ಣನೆ — ಅದರಿಂದಾದ ಪರಿಣಾಮ — ಮುಗಿತಾಯ.

### ಪಟ್ಟಣವಾಸ

**ಮುಖ್ಯಮಾತು—** ಕೆಟ್ಟ ಪಟ್ಟಣ ಸೇರು — ಪಟ್ಟಣಗಳು ಹೇಗೆ ಹುಟ್ಟಿದುವು? — ಪಟ್ಟಣಗಳಲ್ಲಿಯ ಜೀವನ ಸೌಕರ್ಯಗಳು, ವಿನೋದ ಸಾಮಗ್ರಿಗಳು — ಪಟ್ಟಣಗಳಲ್ಲಿ ನೀತಿ — ಆರೋಗ್ಯಗಳಿಗೆ ಹಾನಿ — ಈಗ ಪಟ್ಟಣ ಜೀವನ ಆವಶ್ಯಕವೇ — ಮುಗಿತಾಯ.

## (ಆ) ಕಥನಪರ ನಿಬಂಧಗಳು

### ೧. ಜೀವನ ಚರಿತ್ರ

### ಘನವಂತನಾದ ಅಕಬರ ಬಾದಶಹ

**ಮುಖ್ಯ ಮಾತುಗಳು:** ಹಿನ್ನೆಲೆ — ಜನ್ಮ, ಎಳವೆ, ಪಟ್ಟಾಭಿಷೇಕ — ಸುತ್ತಲಿನ ಸಂಕಟಗಳು — ನಿಷ್ಕಂಟಕ ರಾಜ್ಯಭಾರ — ಸುಧಾರಣೆಗಳು: ಕಂದಾಯ ಪದ್ಧತಿ. ದಿನೇ ಇಲಾಹಿ — ಮುಗಿತಾಯ.

ಜಗತ್ತಿನ ಭಾಗ್ಯಚಕ್ರ ಗಾಲಿಯ ಹಲ್ಲುಗಳಂತೆ ತಿರುಗುತ್ತಿರುತ್ತಿದೆ. ಈ ಏರಿಳಿತಗಳಲ್ಲಿ ಮೊಗಲ ಬಾದಶಹ ಹುಮಾಯೂನನೂ ಸಿಕ್ಕ. ಆತನು ಶೂರ, ಉದಾರ; ಆದರೆ ಮುತ್ಸದ್ದಿಯಲ್ಲ. ಅಯೋಗ್ಯರಿಗೆ ಅಧಿಕಾರವನ್ನು ಕೊಟ್ಟ, ತಮ್ಮಂದಿರನ್ನು ತಲೆಯ ಮೇಲೇರಿಸಿಕೊಂಡ, ಆದರಿಂದ ನಾಡಾಡಿಯಾಗಿ ಅಡವಡವಿಯನ್ನು ಅಲೆಯಬೇಕಾಯಿತು. ಅತ್ತಿತ್ತ ತಿರುಗುತ್ತ ಉಮರ ಕೋಟದ ಗೆಳೆಯನೊಬ್ಬನಲ್ಲಿ ಹೆಂಡತಿ ಸಹಿತವಾಗಿ ನೆಲೆನಿಂತ. ಆ ಉಮರ ಕೋಟದಲ್ಲಿಯೇ ಕ್ರಿ. ಶ. ೧೫೪೨ರಲ್ಲಿ ಆತನಿಗೊಬ್ಬ ಮಗ ಹುಟ್ಟಿದ. ಆತನೇ ಘನವಂತನಾದ ಅಕಬರ.

ಅಕಬರ ಎಳೆಯ ಮಗುವಿದ್ದಾಗ ಆ ತಾಪಗಳ ತವರುಮನೆಯಲ್ಲಿ ಎಷ್ಟು ಕಷ್ಟದಿಂದ ಬೆಳೆದಿರಬೇಕು! ಬದುಕಿದುದೊಂದೇ ಆತನಿಗಾದ ಅನುಕೂಲತೆ. ವಿದ್ಯೆಯಿಲ್ಲ, ರಾಜಕೀಯ ಸಂಸ್ಕಾರವಿಲ್ಲ. ಆ ಕಾಲಕ್ಕೆ ಅವನೂ ಒಬ್ಬ ಸಾಮಾನ್ಯ ಹುಡುಗ. ಅಕಬರ ಹನ್ನೆರಡು ವರುಷದವನಿದ್ದಾಗ ಹುಮಾಯೂನ ಮತ್ತೆ ದಿಲ್ಲಿಯ ದೊರೆತನವನ್ನು ದೊರಕಿಸಿದ. ಆದರೆ ಮರುವರುಷವೇ ತೀರಿಕೊಂಡ. ಹದಿಮೂರು ವರುಷಗಳ ಎಳೆಯ ವಯಸ್ಸಿನಲ್ಲಿ ದಿಲ್ಲಿಯ ಪಟ್ಟಕ್ಕೆ ಕುಳಿತ ಅಕಬರ.

ಆ ಕಾಲಕ್ಕೆ ಸುತ್ತಲೂ ಸಂಕಟಗಳು. ಹುಮಾಯೂನನಿಂದ ಪೆಟ್ಟುತಿಂದ ಪುಂಡ ಮಾಂಡಲಿಕರು ಸ್ವತಂತ್ರರಾಗಲು ಹವಣಿಸಿದರು; ಅಲ್ಲಲ್ಲಿ ದಂಗೆಯೆಬ್ಬಿಸಿದರು. ಈ ಹುಡುಗನನ್ನು ಪಟ್ಟದಿಂದ ತಳ್ಳುವುದಕ್ಕೂ ಮುಂದಾದರು. ಆಗ ಅಕಬರನಿಗೆ ಬೈರಾಮಖಾನನೆಂಬ ಶೂರ ಮಂತ್ರಿಯಿದ್ದ. ಆತನು ದೊಡ್ಡ ಸೈನ್ಯದೊಡನೆ ಪುಂಡರ ಮೇಲೆ ಏರಿ ಹೋದ.

ಆ ಸೈನ್ಯದ ಕೆಲಭಾಗಕ್ಕೆ ಅಕಬರನೂ ಸೇನಾಪತಿಯಾಗಿದ್ದನೆಂದು ಹೇಳುತ್ತಾರೆ. ಇಬ್ಬರೂ ಕೂಡಿ ಮಾಂಡಲಿಕರನ್ನು ಮೆತ್ತಗೆ ಮಾಡಿದರು. ರಾಜ್ಯದಲ್ಲಿ ನೆಮ್ಮದಿಯಾಯಿತು. ರಥ ಸುಸೂತ್ರ ಸಾಗತೊಡಗಿತು.

ಅಕಬರ ಬಾದಶಹ ವಿದ್ಯೆ ಕಲಿತವನಲ್ಲ; ಆದರೂ ಧೋರಣಿ. ಆಗ ಭಾರತದಲ್ಲಿ ರಜಪೂತರು ಒಳ್ಳೇ ಪ್ರಬಲ ಜನಾಂಗ. ಅವರನ್ನು ಒಲಿಸಿಕೊಳ್ಳುವುದೇ ತನ್ನ ರಾಜ್ಯದ ಸ್ಥಿರತೆಗೆ ಕಾರಣ, ಎಂದು ಬಾದಶಹ ಕಂಡು ಹಿಡಿದ. ಅದರಂತೆ ಬೇರೆ ಬೇರೆ ಅಧಿಕಾರಗಳಲ್ಲಿ ರಜಪೂತರನ್ನು ನಿಯಮಿಸಿದ. ಅವರೊಡನೆ ಬೀಗತನವನ್ನು ಬಳೆಸಿದ. ಈ ಕಾರಣದಿಂದ ರಜಪೂತರ ಆತ್ಮೀಯತೆ ಬೆಳೆಯಿತು. ಅವರು ಇದ್ದುದ್ದನ್ನು ಭದ್ರಮಾಡಿದರಲ್ಲದೆ ಮೊಗಲ ಸಾಮ್ರಾಜ್ಯವನ್ನು ಮತ್ತಿಷ್ಟು ಬೆಳೆಸಿದರು. ಗುಣಿಗಳನ್ನು ಗೌರವಿಸುವ ಧೋರಣೆಯಿಂದಲೇ ಅಕಬರ ಘನವಂತನೆಂದು ಹೆಸರಾದ.

ಈ ಬಾದಶಹನಿಗೆ ಹಿಂದು ಮುಸಲ್ಮಾನರೆಂಬ ಭೇದವಿರಲಿಲ್ಲ. ಎಲ್ಲರನ್ನೂ ಸಮ ಭಾವದಿಂದ ಕಾಣುತ್ತಿದ್ದ. ತಾನು ಕೂಡ ಒಮ್ಮೊಮ್ಮೆ ಹಿಂದೂ ವೇಷದಲ್ಲಿ ದರಬಾರಕ್ಕೆ ಬರುತ್ತಿದ್ದನೆಂತೆ. ಒಟ್ಟಾರೆ, ತನ್ನ ಪ್ರಜೆಗಳ ಕಲ್ಯಾಣವಾಗಬೇಕೆಂಬುದೇ ಈತನ ಹೆಬ್ಬಯಕೆ. ಅದಕ್ಕಾಗಿ ಬುದ್ಧಿವಂತ ಮಂತ್ರಿಗಳಿಂದ ರಾಜ್ಯದಲ್ಲಿ ಅನೇಕ ಸುಧಾರಣೆಗಳನ್ನು ಮಾಡಿಸಿದ. ಆ ಕಾಲಕ್ಕೆ ಈತನ ಕಂದಾಯ ಮಂತ್ರಿ ರಾಜಾತೋಡರಮಲ್ಲ. ಈತನ ಕಂದಾಯ ಪದ್ಧತಿ ಈಗಲೂ ಮಾದರಿಯಾಗಿದೆ.

ಹಿಂದು ಮುಸಲ್ಮಾನರಲ್ಲಿ ಐಕ್ಯವನ್ನು ಬೆಳೆಸಲು ಅಕಬರ ದಿನೇ ಇಲಾಹಿ ಎಂಬ ಹೊಸ ಧರ್ಮವನ್ನು ಸ್ಥಾಪಿಸಿದ. ನ್ಯಾಯವಿಚಾರಣೆಯಲ್ಲಿಯೂ ಆತನು ಇಬ್ಬರಿಗೂ ಸಮ್ಮತವಾದ ಶಾಸನಗಳನ್ನು ಮಾಡಿಸಿದ್ದ. ಆಗಾಗ ಹಿಂದೂ ಮುಸಲ್ಮಾನ ವಿದ್ವಾಂಸರನ್ನು ನೆರೆಯಿಸು ತ್ತಿದ್ದ, ಶಾಸ್ತ್ರಗಳ ಚರ್ಚೆಯನ್ನು ನಡೆಸುತ್ತಿದ್ದ.

ಈ ರೀತಿಯಾಗಿ ಅಯ್ವತ್ತುವರ್ಷಗಳವರೆಗೆ ಅಕಬರ ಬಾದಶಹ ಪ್ರಜಾರಂಜಕನಾಗಿಯೇ ಆಳಿದ. ಕ್ರಿ. ವ. ೧೬೦೫ ರಲ್ಲಿ ಆತನ ಅಂತ್ಯವಾಯಿತು. ಆಗ್ರಾದಲ್ಲಿ ಈಗಲೂ ಆತನ ಗೋರಿಯಿದೆ. ಇತಿಹಾಸಕಾರರು ಈ ಬಾದಶಹನನ್ನು ಘನವಂತನೆಂದು ಬಾಯ್ಬಿಟ್ಟು ಹೊಗಳಿದ್ದಾರೆ.

## ಮುಖ್ಯ ಮಾತುಗಳ ಮುನವರಿಕೆ
## ಸರ್. ಜೇ. ನ. ಟಾಟಾ

**ಮುಮ್ಮಾತು:** ಎಳೆತನ, ಶಿಕ್ಷಣ— ಉದ್ಯೋಗಪ್ರವೃತ್ತಿಯ ಆರಂಭ— ಅಪ್ರತಿಮ ಉದ್ಯೋಗಶೀಲ—ಬಗೆಬಗೆಯ ಕಾರ್ಯರಂಗಗಳು—ಔದ್ಯೋಗಿಕ ಅಭಿವೃದ್ಧಿಗಾಗಿ ಪರದೇಶದ ಪ್ರಯಾಣ— ಸಾರ್ವಜನಿಕ ಸೇವೆಯಲ್ಲಿ ವಿವಿಧ ಸಂಸ್ಥೆಗಳ ಸ್ಥಾಪನೆ, ಸಾರ್ವಜನಿಕಹಿತದ ಸಂಸ್ಥೆಗಳು, ಸಂಶೋಧನೆಗೆ ಸಹಾಯ್ಯ— ಟಾಟಾಕಾರಖಾನೆಯ ವಿರಾಟ್ ಸ್ವರೂಪ, ಅದ ರಿಂದ ಔದ್ಯೋಗಿಕ ಅಭಿವೃದ್ಧಿ— ಮುಗಿತಾಯ.

ನಾನು ಮೆಚ್ಚಿದ ರಾಷ್ಟ್ರಪುರುಷ. (ನೇತಾಜಿ ಬೋಸ.) ಹುಟ್ಟಿನ ಹಿನ್ನೆಲೆ— ಹುಟ್ಟಿನ ಸಿರಿಮೆ, ಸುಸಂಸ್ಕೃತ ಮನೆತನ. ಹೇಗೆ— ಎಳವೆ, ವಿದ್ಯಾಭ್ಯಾಸ— ಬಳವೆ, ವಿದ್ಯಾಭ್ಯಾಸ, ಏಕಾಂತವಾಸದ ಪ್ರೀತಿ— ವಿಲಕ್ಷಣ ಮೇಧಾವಿ— ವಿದ್ಯಾರ್ಜನಕ್ಕಾಗಿ ಪರದೇಶ ಪ್ರಯಾಣ— ಆಯ್. ಸಿ. ಎಸ್. ಪದವೀಪ್ರಾಪ್ತಿ— ಮರಳಿ ಮಾತೃಭೂಮಿಗೆ—ತಡವಿಲ್ಲದೆ ಸ್ವಾತಂತ್ರ್ಯ ಸಂಗ್ರಾಮದ ಸೈನಿಕ— ರಾಷ್ಟ್ರೀಯ ಸಭಾಪತಿ— ಪುರೋಗಾಮಿ ಪಕ್ಷಸ್ಥಾಪನೆ— ಕಣ್ಮರೆ— ನೇತಾಜಿ— ಮುಗಿತಾಯ.

## ೨. ಆತ್ಮವೃತ್ತ

**ಮುಖ್ಯ ಮಾತುಗಳು:** ಪೂರ್ವರಂಗ— ಖಡ್ಗದ ಹೇಳಿಕೆ. ಕಬ್ಬಿಣದ ರೂಪದಲ್ಲಿ ಭೂಮಿಯಲ್ಲಿ— ಅಗಿದು ತೆಗೆದಮೇಲೆ— ಉಕ್ಕಿನ ತುಂಡು— ಖಡ್ಗದ ರಚನೆ— ಶೂರನ ಕೈಯಲ್ಲಿ— ತರುವಾಯ ಸರದಾರನಲ್ಲಿ— ಮಕ್ಕಳ ಕಾಲಕ್ಕೆ ಹೆಮ್ಮೆಯ ಗುರುತಾಗಿದ್ದುದು— ಬಡತನಕ್ಕಾಗಿ ಮಾರಾಟ— ವಸ್ತುಸಂಗ್ರಹಾಲಯದವರು ಕೊಂಡುದು— ಮುಂದಿಯ ಮುಂದೆ— ಮುಗಿತಾಯ.

ಆನಂದ ವಸ್ತುಸಂಗ್ರಹಾಲಯವನ್ನು ನೋಡಲು ಹೋಗಿದ್ದ. ಅಲ್ಲಿ ಒಂದು ಹಳೆಯ ಖಡ್ಗ. ಅಬ್ಬ, ಅದರ ಅಗಲವೆಷ್ಟು, ಉದ್ದವೆಷ್ಟು, ದಪ್ಪವೆಷ್ಟು ! ಹಿಡಿಕೆಯಲ್ಲಿ ಅಲ್ಲಲ್ಲಿ ತೂತುಗಳು ! ಅಲ್ಲೇನು ವಜ್ರಗಳನ್ನು ಕೆತ್ತಿದ್ದರೋ ಏನೋ ! ಅದು ಆನಂದನ ಮನಸ್ಸನ್ನು ಬಲವಾಗಿ ಸೆಳೆಯಿತು. ಅದರ ಗತಇತಿಹಾಸವೇನೂ ತಿಳಿಯಲಿಲ್ಲ ಆ ಸಂಸ್ಥೆಯ ಅಧಿಕಾರಿಗಳಿಂದ. ಅಂದು ರಾತ್ರಿ ಕನಸಿನಲ್ಲಿ ಖಡ್ಗವೇ ತನ್ನ ಆತ್ಮವೃತ್ತವನ್ನು ಹೇಳಿತು:

ನನ್ನ ವಯಸ್ಸನ್ನು ಹೇಳಿದರೆ ನಂಬಲಾರೆ. ನಿನ್ನ ಮುತ್ತಜ್ಜನ ತಂದೆಯಾದರೂ ಹುಟ್ಟಿದ್ದನೋ ಇಲ್ಲವೋ, ಆಗ ಎಲ್ಲೆಲ್ಲಿಯೂ ನಮ್ಮ ಬಳಗದವರ ರಾಜ್ಯವೇ ರಾಜ್ಯ ! ನಮ್ಮನ್ನು ಕಂಡರೆ ರಾಜಾಧಿರಾಜರಿಗೂ ವೀರರಿಗೂ ಬಲು ಅಕ್ಕರೆ. ನಮ್ಮ ಮಾನ ಸನ್ಮಾನಗಳಿಗೆ ಅಳತೆಯೇ ಇರಲಿಲ್ಲ. ಇಂತಹ ನನ್ನ ಕುಲ ಕತೆ ಗೊತ್ತಿದೆಯೇ ?

ನಾನು ಹುಟ್ಟುವ ಮೊದಲು ಎಷ್ಟೋ ವರ್ಷಗಳ ವರೆಗೆ ಭೂದೇವಿಯ ಒಡಲಲ್ಲಿಯೇ ಇದ್ದೆ. ಒಮ್ಮೆ ನನ್ನನ್ನು ಕೆಲವು ಖನಕರು ಅಗಿದು ತೆಗೆದರು; ಕಬ್ಬಿಣದ ರೂಪಕ್ಕೆ ತಂದರು. ಆಮೇಲೆ ನಾನು ಬೆಂಕಿಯಲ್ಲಿ ಬಿದ್ದುದೆಷ್ಟು ಸಲ, ಬಡಿಸಿಕೊಂಡುದೆಷ್ಟು ಸಲ ಗೊತ್ತಿದೆಯೇ ನಿನಗೆ ? ಬಳಿಕ ಕುಶಲ ಶಿಲ್ಪಿಯೊಬ್ಬ ನನ್ನನ್ನು ಈ ರೂಪದಲ್ಲಿ ತಂದ ! ಆಗ ನನ್ನ ಮೈ ತಳತಳ ಹೊಳೆಯುತ್ತಿತ್ತು; ಹಿಡಿಕೆಯಲ್ಲಿ ವಜ್ರಗಳು ಲಕಲಕಿಸುತ್ತಿದ್ದುವು. ಇಂತಹ ಸುರೂಪಿಯಾದ ನನ್ನನ್ನು ಯಾರೂ ಮೋಹಿಸಬಹುದಾಗಿತ್ತು.

ಒಮ್ಮೆ ಒಬ್ಬ ಪ್ರಕಾಂಡ ದೇಶದ ಮಹಾಪುರುಷ ಆ ಶಿಲ್ಪಿಯಲ್ಲಿಗೆ ಬಂದ; ನನ್ನನ್ನು ನೋಡಿದ. ಅವನು ಕೈಯಲ್ಲಿ ಹಿಡಿದು ನೋಡಿದ; ಆ ಮೇಲೆ ನನ್ನನ್ನು ಕೆಳಗಿಳಿಸಲೇ ಇಲ್ಲ. ಶಿಲ್ಪಿಗೆ ಹೇರಳ ಹಣವನ್ನು ಕೊಟ್ಟ. ನನ್ನನ್ನು ಹೆಗಲಮೇಲಿಟ್ಟುಕೊಂಡು ನಡೆದ. ಆತನ ಹೆಸರು ರಾಣಾ-ಪ್ರತಾಪಸಿಂಗ ಎಂಬುದು ಆಮೇಲೆ ನನಗೆ ತಿಳಿಯಿತು !

ಅವನೊಬ್ಬ ವೀರಾಧಿವೀರ. ನನ್ನನ್ನು ಯಾವಾಗಲೂ ಸಂಗಡವೇ ಕರೆದೊಯ್ಯುತ್ತಿದ್ದ. ನಾನಾದರೂ ಆತನ ಜೀವದ ಗೆಳೆಯನಾಗಿದ್ದೆ. ಎಷ್ಟೋ ಸಲ ಆತನನ್ನು ಪ್ರಾಣಾಪಾಯದಿಂದ ಪಾರುಮಾಡಿದೆ; ಆತನ ವೈರಿಗಳ ರುಂಡಗಳನ್ನು ಚೆಂಡಾಡಿದೆ. ಆಗಿನ ನನ್ನ ಮಾನಮನ್ನಣೆಗಳನ್ನು ನೆನೆಸಿದರೆ ಈಗಲೂ ನವಿರೇಳುತ್ತಿದೆ.

ಆದರೆ ದೈವಗತಿ! ಆ ಮಹಾಪುರುಷನ ಅಂತ್ಯವಾಯಿತು. ನಾನೊಬ್ಬ ಸರದಾರನ ಕೈಗೆ ಸಿಕ್ಕೆ. ಅವನಾದರೂ ನನ್ನನ್ನು ಮನ್ನಣೆಯಿಂದ ಕಂಡ. ಆತನಿಗೂ ನಾನು ಹಲವಾರು ಉಪಕಾರಗಳನ್ನು ಮಾಡಿದೆ. ಮುಂದೆ ಸರದಾರನೂ ಸತ್ತುಹೋದ. ನಾನು ಆತನ ಮಕ್ಕಳ ಆಸ್ತಿಯಾದೆ. ಅವರೇನೂ ಅಷ್ಟು ವೀರರಲ್ಲ. ನನಗೂ ಅವರಿಗೂ ಅಷ್ಟಾಗಿ ಗೆಳೆತನ ಬೆಳೆಯಲಿಲ್ಲ. ತಮ್ಮ ವಂಶದ ವೀರತನದ ಹೆಮ್ಮೆಯ ಗುರುತೆಂದು ನನ್ನನ್ನು ಕಾಯುತ್ತಿದ್ದರು. ನನ್ನ ಯೋಗಕ್ಷೇಮವನ್ನು ನೋಡಿಕೊಳ್ಳುತ್ತಿರಲಿಲ್ಲ. ಆದರಿಂದ ನನ್ನ ಮೈ ಜಂಗುಹಿಡಿಯಿತು.

ಮುಂದೆ ಮಕ್ಕಳು ಬಡತನಕ್ಕೆ ಬೀಡಾದರು. ಸಿಕ್ಕಷ್ಟು ಹಣಕ್ಕೆ ನನ್ನನ್ನು ಒಬ್ಬ ವ್ಯಾಪಾರಿಗೆ ಮಾರಿದರು. ಅವನು ನನ್ನ ಮೈಯನ್ನು ಉಜ್ಜಿದ, ಮತ್ತೆ ಹೊಳೆಯುವಂತೆ ಮಾಡಿದ; ನನ್ನಂತೆ ಕಾದುವ ಕಲಿಗಳ ಗುಂಪಿನಲ್ಲಿ ನನ್ನನ್ನು ಇಟ್ಟ.

ಒಂದು ದಿವಸ ಈ ವಸ್ತುಸಂಗ್ರಹಾಲಯದ ಅಧಿಕಾರಿಗಳು ಅಲ್ಲಿಗೆ ಬಂದರು; ನನ್ನನ್ನು ಕೊಂಡು ತಂದರು; ಮಂದಿಯ ಮುಂದೆ ಮೆರೆಸಬೇಕೆಂದು ಇಲ್ಲಿ ಇಟ್ಟರು. ಮುಪ್ಪಿನಕಾಲದ ನನ್ನ ವಿರಾಮಸ್ಥಾನವಾಗಿದೆ ಈ ವಸ್ತುಸಂಗ್ರಹಾಲಯ. ನನಗಾದರೂ ಇನ್ನಾವ ಮಹತ್ವಾಕಾಂಕ್ಷೆಯೂ ಇಲ್ಲ. ಸಿಡಿಮದ್ದಿನ ಗುಡುಗಾಟದಲ್ಲಿ ಖಡ್ಗದ ಖಣಖಣಾಟ ಯಾರಿಗೆ ಬೇಕು?

---

## ಮುಖ್ಯ ಮಾತುಗಳು

### ಕಡುಬಿನ ಕೈಫಿಯತ್ತು

ಮುಖ್ಯ ಮಾತುಗಳು:— ಹಿನ್ನೆಲೆ— ಕಡಲೆಯ ಬೆಳೆ ಇದ್ದಾಗ— ಬೇಳೆಯಾದ ಮೇಲೆ ಬೇಯುವುದು— ಬೆಲ್ಲದೊಡನೆ ಬೆರಕೆ— ಸವಿಗಾರರ ಸವಿ ತುತ್ತು— ಹೆರವರ ಹಿತಕ್ಕಾಗಿ ಆತ್ಮಾರ್ಪಣದ ಆನಂದ— ಮುಗಿತಾಯ.

### ಹಳೆಯ ಕೋಟಿನ ಹೇಳಿಕೆ

**ಮುಖ್ಯ ಮಾತುಗಳು:**— ಹಿನ್ನೆಲೆ - ಬಿನ್ನಿ ಗಿರಣಿಯಲ್ಲಿ ಬವಣೆಪಟ್ಟುದು - ಕೋಟಿನ ಅರಿವೆಯಾಗಿ ಕನ್ನಡಿಯ ಕಪಾಟನಲ್ಲಿ— ಸೊಗಸುಗಾರನ ಸಹವಾಸದಲ್ಲಿ ಸಂತೋಷ— ಇಳಿಗಾಲದಲ್ಲಿ ಹಳೆಯ ಮಾದರಿಯೆಂದು ಹೀಯಾಳಿಕೆ— ಮನೆಯಾಳಿನ ಮೈಮೇಲೆ— ಕಂಚುಗಾರರ ಕೈಯಲ್ಲಿ— ಈಗ ಬಡವರ ಗುಡಿಸಲಲ್ಲಿ— ಮುಗಿತಾಯ.

## ಹಳೆ ಹೊತ್ತಗೆಯ ಹೇಳಿಕೆ

**ಮುಖ್ಯಮಾತುಗಳು:** ಹಿನ್ನೆಲೆ— ಕಾಗದದ ಕಾರಖಾನೆಯಿಂದ ಕಡೆಗೆ— ಹೊತ್ತಗೆಯಾಗಿ ಹೊರಟ ಕಾಲ— ಹೆಸರಿನ ಹೆಮ್ಮೆ— ಓದುಗರ ಒಲವು— ಜೀವದ ಜೊತೆಗಾರ— ಪರೀಕ್ಷೆ ಮುಗಿದ ಮೇಲೆ— ಸೆಕೆಂಡ ಹ್ಯಾಂಡ್ ಬುಕ್ ಡಿಪೋದಲ್ಲಿ— ಬಡ ವಿದ್ಯಾರ್ಥಿಯ ಬಿಡಾರದಲ್ಲಿ— ತೂಗುವ ತಕ್ಕಡಿಯವನ ಕೈಯಲ್ಲಿ— ಮಿಠಾಯಿ ಪುಡಿಕೆ— ಬೀದಿಯ ಪತ್ರಾವಳಿ— ಮುಗಿತಾಯ.

---

೩. ಕಥನಾತ್ಮಕ

## ಮೋಟರ ಅಪಘಾತ

**ಮುಖ್ಯ ಮಾತುಗಳು:** ವಿಷಯಾರಂಭ— ದಾರಿಯಲ್ಲಿಯ ದೃಶ್ಯಗಳು— ಮೋಟರುಗಳ ಮಾರ್ಗದಲ್ಲಿ— ಕರುಳು ಕಿವಿಚುವ ನೋಟ— ಮೋಟರ ಮುಂದೆ ಹೋದಾಗ— ಸಾರಥಿ (ಡ್ರೈವರ) ಕೈಲಾಸ ಪಥದಲ್ಲಿ— ಮುಗಿತಾಯ.

ಅಂದು ನಮ್ಮ ವ್ಯಾಕರಣ– ವಿವಿಧ ಸಾಹಿತ್ಯದ ಹತ್ತನೆಯ ಪುಸ್ತಕ ಬೆಳಕಿಗೆ ಬರುವ ಭಾಗ್ಯದ ದಿನ. ಬೆಳಗಿನ ಎಂಟು ಗಂಟೆಗೇ ಮನೆಬಿಟ್ಟು ಅಚ್ಚುಮನೆಯ ಕಡೆಗೆ ಹೊರಟೆ. ಟಾಂಗಾ ಮೆಲ್ಲಗೆ ಸಾಗಿತ್ತು. ಅರ್ಧ ಮೈಲು ಹೋಗುವಷ್ಟರಲ್ಲಿಯೇ ಕಿವಿ ಹರಿಯುವಂತೆ ಕಿರಿಚುವ ಮೋಟಾರ ಹಾರ್ನ ಧ್ವನಿ ಕೇಳತೊಡಗಿದುವು. ಒಂದಾದ ಮೇಲೊಂದು, ನಡುವೆ ಬಿಡುವೇ ಇಲ್ಲ. ಎಲ್ಲಿಯೋ ಬೆಂಕಿ ಹತ್ತಿದುದಕ್ಕಾಗಿ "ಫಾಯರ್ ಫಾಯಟರ್" ಹೋಗುತ್ತಿದೆಯೊ ಎನಿಸಿತು.

ತುಸು ಮುಂದೆ ಹೋಯಿತು ಟಾಂಗಾ ಹಾದಿಯ ಹವಣರಿಯದೆ ಒಂದರ ಹಿಂದೊಂದು ಮೋಟರುಗಳ ಸಾಗಾಟ. ಸಮೀಪಕ್ಕೆ ಹೋದಾಗ ತಿಳಿಯಿತು ಅವು ಮಿಲಿಟರಿ ಮೋಟಾರುಗಳೆಂದು. ಮಾನವತೆಯನ್ನು ಮರೆತು ಕಡಿವಾಣವಿಲ್ಲದ ಕುದುರೆಯಂತೆ ಕುಣಿದಾಡುವ ಕಟ್ವಾಳುಗಳವರು. ನಮಗೆ ಜೀವದ ಭಯ. ಹಾಗೆಯೇ ಕಾಲುದಾರಿಗುಂಟ ನಮ್ಮ ಟಾಂಗಾ ಸಾಗತೊಡಗಿತು. ಅದು ಕೂಡ ಮಂದವೇಗದಲ್ಲಿ.

ಆ ಮಿಲಿಟರಿ ಮೋಟಾರುಗಳು ಟಾರ ರೋಡ ಮೇಲೆ ತಾಸಿಗೆ ೬೦ ಮೈಲಿಗೆ ಕಡಿಮೆ ಇಲ್ಲದ ವೇಗದಿಂದ ಓಡುತ್ತಿದ್ದುವು. ಊರೊಳಗೆ ೫ ಮೈಲುಗಳಿಗಿಂತ ವೇಗ ಮಿಕ್ಕಕೂಡದು. ಈ ನಿಯಮ ಅವರಿಗೆ ಅನ್ವಯಿಸುತ್ತಿರಲಿಲ್ಲವೇನೋ! ಏಕೆಂದರೆ, ಪೋಲೀಸರು ಸುಮ್ಮನೆ ಅವರಿಗೆ ದಾರಿಯನ್ನು ತೋರುತ್ತಿದ್ದರು.

ಆ ಮೋಟಾರುಗಳು ಒಂದರಿಂದೊಂದು ಇಪ್ಪತ್ತು ಮಾರು ದೂರವಿದ್ದರೆ ಬಹಳ ನಾಯಿತು. ಆ ವೇಗದಲ್ಲಿ ಯಾವ ಡ್ರೈವರನೂ ಹೆಚ್ಚುಕಡಿಮೆ ಮಾಡುವಂತಿಲ್ಲ. ಹಾಗೇನಾದರೂ ಮಾಡಿದರೆ ಹಿಂದಾಗಲಿ ಮುಂದಾಗಲಿ ಡಿಕ್ಕಿ ಹೊಡೆಯುವುದು ತಪ್ಪುವಂತಿರಲಿಲ್ಲ. ಆ ಯಂತ್ರಗಳಿಗೆ ಕೂಡ ಈ ಮಾತು ಗೊತ್ತಿದ್ದಿತೇನೋ! ಅವು ಕೂಡ ಕೆಡದಂತೆ— ಕಾಡಿಸದಂತೆ— ಸಾಗಿದ್ದುವು.

ಇದ್ದಕ್ಕಿದ್ದ ಹಾಗೆ ನಾಯಿಕುನ್ನಿಯೊಂದು ಹಾದಿಗೆ ಅಡ್ಡಲಾಗಿ ಬಂದಿತು. ಆದರ ಭೀಕರ ದುರಂತವನ್ನು ನಾವು ಕಲ್ಪಿಸುವ ಮೊದಲೇ ಕುನ್ನಿ ನೆಲಕ್ಕೊರಗಿತು, ತಲೆಯೊಡೆಯಿತು. ನಾವು ಅಯ್ಯೋ ಎನುವಷ್ಟರಲ್ಲಿಯೇ ಅದರ ಮೇಲೆ ಮತ್ತೊಂದು ಮೋಟರು, ಹಾಗೆಯೇ ಮೂರನೆಯದು, ನಾಲ್ಕನೆಯದು. ಅದರ ಮಾಂಸ ಎಲುವುಗಳೆಲ್ಲ ಗಾಲಿಗೆ ಹತ್ತಿಕೊಂಡು ಹೋದುವು. ಕೆನ್ನೀರು ಮಾತ್ರ ಹಾದಿಯ ಮೇಲೆ ಹರಿದಿತ್ತು. ಅಯ್ಯೋ ಆ ಬಡಪ್ರಾಣಿಯ ದುರಂತಕ್ಕೆ ದುಃಖಿಸುವವರಾರು? ದೇವರ ರಾಜ್ಯದಲ್ಲಿಯಾದರೂ ಈ ದುಷ್ಟತನಕ್ಕೆ ದಂಡವಿದೆಯೇ?

ನಮ್ಮ ಟಾಂಗಾ ಹಾದಿಗುಂಟ ಎರಡು ಫರ್ಲಾಂಗ ಹೋಯಿತು. ಅಲ್ಲಿ ಜನಜಂಗುಳಿ. ಪೋಲೀಸರ ಸೀಟಿಯ ಮೇಲೆ ಸೀಟಿ. ನಾವೂ ಭರದಿಂದ ಸಾಗಿದೆವು. ಅಯ್ಯೋ ನೋಡಬಾರದು ಎನಿಸಿತು ಆ ದುರಂತವನ್ನು. ಗುರುತು ಹಿಡಿಯಲು ಕೂಡ ಬಾರದಂತೆ ಡ್ರೈವರನ ಮುಖ ಜಜ್ಜಿಹೋಗಿತ್ತು. ಆತನು ನಡೆಸುತ್ತಿದ್ದ ಗಾಡಿಯ ಯಂತ್ರ ಕೆಟ್ಟಿತೆಂತೆ; ಅದು ನಿಲ್ಲುವುದರೊಳಗೇ ಹಿಂದಿನ ಮೋಟಾರು ಡಿಕ್ಕಿ ಹೊಡೆಯಿತೆಂತೆ. ದೇವರ ರಾಜ್ಯದಲ್ಲಿ ನಾಯಿಯ ಮರಣದ ಮುಯ್ಯವೆನಬೇಕೇ ಇದನ್ನು! ಆದರೆ ಪಾಪವಾರದು, ಫಲ ಯಾರಿಗೆ?

## ದಸರೆಯ ದಿನಾಚರಣೆ

**ಮುಮ್ಮಾತು:** ವಿಜಯದಶಮಿಯ ಮಹತ್ವ— ಬೆಳಗಿನ ಚಟುವಟಿಕೆಗಳು— ಊರಲ್ಲಿ ಕುದುರೆಗಳ ಮೆರವಣಿಗೆ— ಮಧ್ಯಾಹ್ನಕ್ಕೆ ಸವಿತುತ್ತಿನ ಸೊಗಸು— ಸಂಜೆಯ ಮುಂದೆ ಬೆಡಗಿನ ಬಟ್ಟೆಗಳ ಭೂಷಣ— ದೇವರ ಪಲ್ಲಕ್ಕಿಯೊಡನೆ— ಸೀಮೋಲ್ಲಂಘನ— ರಾತ್ರಿ ಬನ್ನಿ ಕೊಡುವುದು, ಹರಕೆ, ಹಾರೈಕೆಗಳ ಲಾಭ— ಮುಗಿತಾಯ

## ಸಂಜೆಯಲ್ಲಿ ಸಂಚಾರ

**ಮುಮ್ಮಾತು:** ಸಂಚಾರಕ್ಕೆ ಹೊರಟುದೇಕೆ— ಸಂಧ್ಯಾಸಮಯದ ಸೃಷ್ಟಿಸೌಂದರ್ಯ— ದಾರಿಯುದ್ದಕ್ಕೂ ಕಾಣುವ ಚಟುವಟಿಕೆಗಳು— ಸಂಜೆಯಾದಂತೆ ಸೃಷ್ಟಿಯ ಸನ್ನಿವೇಶ— ಮನಸ್ಸಿನ ಮೇಲಾದ ಪರಿಣಾಮ— ಮುಗಿತಾಯ.

# ೪. ವಿವರಣಾತ್ಮಕ ನಿಬಂಧಗಳು

## ಕಬ್ಬಿಣ

**ಮುಮ್ಮಾತು:** ಕಬ್ಬಿಣದ ಹುಟ್ಟುಮೆಟ್ಟು— ಜನ್ಮ ಭೂಮಿಗಳು— ಪ್ರಕಾರಗಳು, ಅವುಗಳ ಉಪಯೋಗ— ಕಬ್ಬಿಣದ ಕುಲಪರಂಪರೆ— ಉಪಯೋಗ— ಲಾಭ— ಹಾನಿ— **ಉಪಸಂಹಾರ.**

ಮಾನವ ಸೃಷ್ಟಿಯಾದ ಮೇಲೆ, ಮಂಗ ಮಾನವನಿಂದ ಆರಂಭಿಸಿ ಇಂದಿನ ಸುಧಾರಣೆಯ ಸುಂದರ ಮೂರ್ತಿಯ ವರೆಗೆ ಬೇರೆ ಬೇರೆ ಯುಗಗಳಾಗಿವೆ. ಕಲ್ಲಿನಯುಗ, ತಾಮ್ರ

ಯುಗ, ಕಬ್ಬಿಣಯುಗ ಮುಂತಾಗಿ. ಇವು ಅವರ ಜೀವನದ ರೀತಿನೀತಿಗಳಿಗೆ ಸಂಬಂಧ ಪಟ್ಟ ಹೆಸರುಗಳು. ಇಂದಿನ ಯುಗವನ್ನು ಕಬ್ಬಿಣದ ಯುಗವೆಂದು ಹೇಳುತ್ತಾರೆ. ಕಾರಣ ವಿಷ್ಟೇ: ನಮ್ಮ ನಿತ್ಯದ ಜೀವನದಲ್ಲಿ ಒಂದಿಲ್ಲೊಂದು ಬಗೆಯಿಂದ ಕಬ್ಬಿಣದ ಉಪಯೋಗ ವಿದ್ದೇ ಇದೆ. ರಾಷ್ಟ್ರನಿರ್ಮಾಣಕ್ಕೂ ರಾಷ್ಟ್ರನಿರ್ನಾಮಕ್ಕೂ ಕಬ್ಬಿಣವೇ ಕಾರಣವಾಗಿದೆ.

ಇಷ್ಟೊಂದು ಮಹತ್ವವುಳ್ಳ ಕಬ್ಬಿಣದ ಹುಟ್ಟು-ಮೆಟ್ಟು ಯಾವುದು? ಅದಕ್ಕಾಗಿ ಭೂಗರ್ಭವನ್ನೇ ಭೇದಿಸಬೇಕು. ಕೆಲಕೆಲವು ಕಣಿಗಳನ್ನು ಅಗಿದಾಗ ಈ ಕಬ್ಬಿಣ ಕೂಡಿದ ಮಣ್ಣು ಸಿಕ್ಕುತ್ತಿದೆ. ಆ ಕಾಲಕ್ಕೆ ಅದು ಬಲು ಅಶುದ್ಧ. ಬೇಡಾದ ಒಡವೆಗಳ ಬಳಗದಲ್ಲಿ ಕೂಡಿರುತ್ತಿದೆ. ಅದಕ್ಕೆ ಒಡೆದು ತೋರುವ ಬಣ್ಣವೂ ಇಲ್ಲ, ನಿಶ್ಚಿತ ರೂಪವೂ ಇಲ್ಲ. ಆ ಅಶುದ್ಧ ಅದಿರನ್ನು ಯಂತ್ರಶಾಲೆಗಳಲ್ಲಿ ಸಂಸ್ಕರಿಸಿ ಸಂಸ್ಕರಿಸಿ ಹೊಲಸನ್ನೆಲ್ಲ ಹೊರಗೆ ಹಾಕು ತ್ತಾರೆ, ಕಬ್ಬಿಣದ ರೂಪಕ್ಕೆ ತರುತ್ತಾರೆ.

ಕಬ್ಬಿಣ ಯುರೋಪದ ಉತ್ತರದಲ್ಲಿ ಹಾಗು ಉತ್ತರ ಅಮೇರಿಕೆಯಲ್ಲಿ ಹೇರಳವಾಗಿ ಸಿಕ್ಕುತ್ತಿದೆ. ಹಿಂದುಸ್ತಾನ, ಆಸ್ಟ್ರೇಲಿಯಾಗಳಲ್ಲಿಯೂ ಸಾಧಾರಣವಾಗಿ ದೊರೆಯುತ್ತಿದೆ. ಎಂತೆಯೇ ಆ ಆ ಭಾಗಗಳಲ್ಲಿ ಯಂತ್ರಗಳು ಹೆಚ್ಚಾಗಿವೆ.

ಈ ಕಬ್ಬಿಣದಲ್ಲಿಯೂ ಮೂರು ನಾಲ್ಕು ಬಗೆಗಳಿವೆ. ಪಿಗ್‌ಆಯರ್ನ್ (ಕಬ್ಬಿಣ) ಎಂಬುದು ಬಲು ಮಿದುವಾದ ಕಬ್ಬಿಣ. ಇದರ ಉಪಯೋಗ ಸಾಮಾನ್ಯ ಒಡವೆಗಳ ಸಿದ್ಧತೆಗಾಗಿ ಮಾತ್ರ. ಕರಗಿವ ಕಬ್ಬಿಣ ಮತ್ತೊಂದು ಬಗೆಯದು. ಇದು ನೂರಾರು ವರುಷಗಳ ವರೆಗೂ ಕೆಡುವಂತಹುದಲ್ಲ. ಇದನ್ನು ಕೊಳವೆಗಳ ರಚನೆಯಲ್ಲಿ ಉಪಯೋಗಿಸು ವುದೇ ಬಹಳ. ಮೂರನೆಯ ಅವಸ್ಥೆಯೆಂದರೆ ಶುದ್ಧ ಕಬ್ಬಿಣ. ಇದನ್ನು ಬೇಕಾದ ರೂಪ ದಲ್ಲಿ ತರಬಹುದು. ಕೆಡುವ ಗುಣವೂ ಇದರಲ್ಲಿ ಇಲ್ಲ. ಆದುದರಿಂದ ಸಣ್ಣ ದೊಡ್ಡ ಯಂತ್ರಗಳಲ್ಲಿಯೂ ಯಂತ್ರ ಸಲಕರಣೆಗಳ ಸಿದ್ಧತೆಯಲ್ಲಿಯೂ ಇದರ ಉಪಯೋಗವಾಗು ವುದು. ತಂತಿಗಳು ಕೂಡ ಇದರಿಂದಾಗುತ್ತಿವೆ.

ಈ ಕಬ್ಬಿಣ ಯುಗವೇ ಮುಂದೆ ಉಕ್ಕಿನ ಯುಗವಾಗಿದೆ. ಕಬ್ಬಿಣಕ್ಕೆ ಕಾರ್ಬನ್, ಗಂಧಕ, ಫಾಸ್ಫೋರಸ್ ಇವುಗಳ ರಾಸಾಯನಿಕ ಸಂಸ್ಕಾರವಾದರೆ ಉಕ್ಕು ಸಿದ್ಧವಾಗುತ್ತಿದೆ. ಇದು ಬಲು ಬಿರುಸು, ಹೊಳಪುಳ್ಳುದು, ತೀಕ್ಷ್ಣವಾದುದು, ಬಲವುಳ್ಳುದು. ಆದುದರಿಂದ ಕಾರ್ಯಕೌಶಲದ ಸಾಧನ-ಸಲಕರಣೆಗಳಿಗೆಲ್ಲ ಉಕ್ಕನ್ನೇ ಉಪಯೋಗಿಸುತ್ತಾರೆ. ದೊಡ್ಡ ದೊಡ್ಡ ಕಟ್ಟಡಗಳನ್ನು ಕಟ್ಟುವುದರಲ್ಲಿಯೂ ಇದರ ಉಪಯೋಗ ಹೆಚ್ಚು.

ಆಧುನಿಕ ಯಂತ್ರಯುಗವನ್ನು ಕಬ್ಬಿಣ–ಉಕ್ಕುಗಳ ಯುಗವೆಂದು ಧಾರಾಳವಾಗಿ ಹೇಳಬಹುದು. ಮುಂದುವರಿದ ಮುಂದುವರಿಯಬೇಕೆನಿಸುವ ಯಾವುದೇ ದೇಶವೂ ಈ ಎರಡು ಧಾತುಗಳ ಭದ್ರಬುನಾದಿಯ ಮೇಲೆಯೇ ತಮ್ಮ ಸಂಪತ್ತಿನ ಸೌಧವನ್ನು ಸೃಷಿಸು ತ್ತಿವೆ. ನಮ್ಮ ನಿತ್ಯದ ಆಹಾರಗಳಲ್ಲಿಯೂ ಈ ಕಬ್ಬಿಣ ಉಕ್ಕುಗಳ ಅಂಶವಿರುತ್ತದೆ. ಇದ ರಿಂದಲೇ ದೇಹಕ್ಕೆ ದಾರ್ಢ್ಯ ಬರುತ್ತದೆ.

ಹೀಗೆ, ಮಾನವನ ಬೆಳಿಗೆಗೆ ಕಾರಣವಾದ ಕಬ್ಬಿಣ ನರಲೋಕದ ನಿರ್ನಾಮಕ್ಕೂ ಕಾರಣವಾಗುತ್ತಿರುವುದು ಶೋಚನೀಯ. ಆಧುನಿಕ ಯುದ್ಧದ ಯಂತ್ರೋಪಕರಣಗಳೆಲ್ಲ ಈ ಎರಡು ಧಾತುಗಳಿಂದಲೇ ಆಗಿವೆ. ಒಂದೇ ಒಂದು ಅಣುಬಾಂಬು, ಕಾಸ್ಮಿಕ್ ಬಾಂಬುಗಳಿಂದ ಆಗುವ ಅನಾಹುತಗಳನ್ನು ಬೇರೆಯಾಗಿ ಬಣ್ಣಿಸಬೇಕಿಲ್ಲ. ಆದರೆ, ಇದರಲ್ಲಿ ಸಮಾಧಾನವಿಷ್ಟೇ! ಈ ದುರಂತಕ್ಕೆ ಕಾರಣ ಕಬ್ಬಿಣ ಉಕ್ಕುಗಳಲ್ಲ; ಅವುಗಳ ದುರುಪಯೋಗವನ್ನು ಮಾಡಿಕೊಳ್ಳುವ ಮದಾಂಧ ಮಾನವ ಜಾತಿ! ಈಗ ಕಾಲ ಬದಲಾಗುತ್ತಿದೆ ಯುದ್ಧದ ಬದಲು ಶಾಂತಿಸಂಧಾನದ ಪ್ರಯತ್ನಗಳು ನಡೆದಿವೆ. ಇದಕ್ಕೇನಾದರೂ ಯಶಸ್ಸು ದೊರೆತರೆ, ಕಬ್ಬಿಣ ಉಕ್ಕುಗಳು ಮಾನವ ಕುಲಕ್ಕೆ ಭೂಲೋಕದಲ್ಲಿಯೇ ದೊರೆತ ಪರುಸುಗಲ್ಲು (ಸ್ಪರ್ಶಮಣಿ) ಎನಿಸಬಹುದಲ್ಲವೇ?

---

## ಮುಖ್ಯ ಮಾತುಗಳು

### ಚಹಾ

**ಮುನ್ಮಾತು—** ಚಹಾದ ಬಳಕೆ— ಚಹಾದ ಬೆಳಸು: ತೋಟಗಳು, ಹವೆ, ನೀರು, ನೆಲ ಎಂತಹದಿರಬೇಕು— ಎಲೆಯನ್ನು ಉಡಿವುದು— ಸಂಸ್ಕಾರ— ಚಹಾದ ಜನ್ಮಭೂಮಿಗಳು— ಉಪಯೋಗ— ಲಾಭ— ಹಾನಿ— ಔದ್ಯೋಗಿಕ ಮಹತ್ತ್ವ— ಮುಗಿತಾಯ.

### ರೇಡಿಯೋ ರೂಪಕಗಳು

**ಮುನ್ಮಾತು—** ಎಂದರೇನು?— ಕಾಲನಿಯಂತ್ರಣವೆಷ್ಟು— ಕಥಾ ವಸ್ತುವೆಂತಹದು— ಒಂದೇ ಸಮಸ್ಯೆ— ಚಿಕ್ಕ ಚಿಕ್ಕ ಭಾಷಣಗಳು— ಬಳಕೆಯ ಭಾಷೆ, ಶೈಲಿ— ಪಾತ್ರಗಳು ಸಣ್ಣ ಸಂಖ್ಯೆಯಲ್ಲಿ— ಸನ್ನಿವೇಶಗಳು ಎರಡೋ ಮೂರೋ— ಕಣ್ಣಿನ ಬದಲು ಕಿವಿಯಿಂದ ನೋಡಬಹುದಾದ ರಂಗ ನಿರ್ದೇಶನ— ಅಲ್ಲಲ್ಲಿ ಧ್ವನಿ ಪರಿಣಾಮ— ಸ್ವಲ್ಪ ಮಟ್ಟಿಗೆ ಸಂಗೀತದ ಸಾಹಾಯ್ಯ— ಪುಟಸಂಖ್ಯೆ ೧೨ ರಿಂದ ೨೦ರ ವರೆಗೆ— ಅಲ್ಪಾವಧಿಯಲ್ಲಿ ನೇರವಾದ ಪರಿಣಾಮ— ಮುಗಿತಾಯವನ್ನು ಕೇಳುವವರ ನಿರ್ಣಯಕ್ಕೇ ಒಪ್ಪಿಸಬೇಕು.

**ವಿಚಾರ ವಿನಿಮಯ:** ಈ ವರೆಗೆ ನಿಮಗೆ ನಾಲ್ಕಾರು ನಿಬಂಧಗಳನ್ನು ಬರೆದು ತೋರಿಸಿದೆ. ಅವುಗಳ ಅಡಿಯಲ್ಲಿ ಕೆಲಕೆಲವು ವಿಷಯಗಳ ಮುಖ್ಯ ಮಾತುಗಳನ್ನು ಕೊಟ್ಟಿದೆ. ಇದಿಷ್ಟೇ ದಿಗ್ದರ್ಶನ ಸಾಕು, ಈ ಎರಡು ಬಗೆಯ ನಿಬಂಧಗಳ ಬಗೆಗೆ. ಈ ಮುಖ್ಯ ಮಾತುಗಳಿಂದಲೇ ನೀವು ನಿಬಂಧಗಳನ್ನು ಬರೆಯ ಬಲ್ಲಿರಿ. ಏಕೆಂದರೆ, ಹಿಂದಿನ ತರಗತಿಗಳಲ್ಲಿ ಇವೇ ಎರಡು ಬಗೆಗಳನ್ನು ಬೇರೆ ಬೇರೆ ಉದಾಹರಣಗಳಿಂದ ವಿವರಿಸಿದೆ; ಆ ಬಗೆಗೆ ಸೂಕ್ತ ಸಲಹೆಗಳನ್ನು ಕೊಟ್ಟಿದೆ. ಅವುಗಳನ್ನೇ ಇಲ್ಲಿ ಮತ್ತೆ ಮತ್ತೆ ಬಿತ್ತರಿಸುವುದು ಹೊಟ್ಟನ್ನು ಕಟ್ಟಿದಂತಾಗಬಹುದೆಂದು ಬಿಟ್ಟಿದೆ. ನಿಮಗೆ ಬೇಕೆನಿಸಿದರೆ, ವ್ಯಾಕರಣ ವಿವಿಧ ಸಾಹಿತ್ಯ ಮಾಲೆಯ ೪-೫ನೆಯ ಕುಸುಮಗಳಲ್ಲಿ ಈ ವಿಷಯಗಳನ್ನು ಮತ್ತೊಮ್ಮೆ ನೋಡಿಕೊಳ್ಳಬಹುದು.

## (ಇ) ಚಿಂತನಪರ ನಿಬಂಧಗಳು

### ೧. ಗ್ರಾಮೋದ್ಧಾರ

**ಮುಮ್ಮಾತು:** ಎಂದರೇನು ?— ಉಪಾಯಗಳು— ಲಾಭ— ಮುಗಿತಾಯ.

ಯಾವ ದೇಶದಲ್ಲಿಯೂ ಮೊದಲು ಹುಟ್ಟಿದುದು ಹಳ್ಳಿ; ಹಿಂದುಗಡೆಯಿಂದ ಮಾನವ ಪಟ್ಟಣಗಳನ್ನು ಮಾಡಿಕೊಂಡ, ಎಂದು ಹೇಳುವದುಂಟು. ಇದರಿಂದ, ಹಳ್ಳಿಗಳೇ ರಾಷ್ಟ್ರಗಳ ತಳಹದಿ. ಪಟ್ಟಣಗಳು ಅದರ ಮೇಲೆ ಕಟ್ಟಿದ ಮಂದಿರ, ಎಂದು ಹೇಳಬಹುದಾಗಿದೆ. ಎಂದಮೇಲೆ, ಹಳ್ಳಿಗಳು ಹಸನಾಗುವುದರಲ್ಲಿಯೇ ದೇಶದ ದೊಡ್ಡಿತೆಯಿದೆಯೆಂಬುದು ಅರ್ಥಾತ್ ಸಿದ್ಧವಾಗುತ್ತಿದೆ.

ನಮ್ಮ ಭಾರತವಂತೂ ಹಳ್ಳಿಗಳ ದೇಶ. ಸುಮಾರು ಮುಕ್ಕಾಲು ಭಾಗ ಕ್ಷೇತ್ರದಲ್ಲಿ ಹಳ್ಳಿಗಳೇ ಹರಡಿಕೊಂಡಿವೆ. ಭಾರತ ಬಲವಂತವಾಗಬೇಕಾದರೆ ಈ ಹಳ್ಳಿಗಳು ದಿಳ್ಳಿಗಳಾಗಬೇಕು; ಇಲ್ಲವಾದರೆ ದಿಲ್ಲಿಯ ದೊರೆತನಕ್ಕೆ ದೃಢತೆಯಿಲ್ಲ. ಈ ಕಾರಣದಿಂದಲೇ ಮಹಾತ್ಮಾಜಿ ಹಳ್ಳಿಗಳಿಗೆ ಹಿಂದಿರುಗಿರಿ (Back to Villages) ಎಂದು ಹೇಳುತ್ತಿದ್ದರು. ಈ ಮಾತನ್ನು ಭಾರತ ಸರಕಾರ ಮುಂದಟ್ಟು ಮಾಡಿಕೊಂಡಿದೆ. ಆ ಬಗೆಗೆ ಪ್ರಯತ್ನಿಸುತ್ತಲಿದೆ. ಈ ಪ್ರಯತ್ನಕ್ಕೆ ಸಾಮಾಜಿಕರೂ ಬೆಂಬಲ ಕೊಡುವುದು ಹೇಗೆ ಎಂಬುವನ್ನು ಸ್ವಲ್ಪದರಲ್ಲಿ ವಿವರಿಸುವೆವು. ಎರಡೂ ಕೈ ಕೂಡಿದರೆ ಚಪ್ಪಾಳೆಯಾಗಲು ತಡೆಯೇ ?

ಭಾರತದಲ್ಲಿ ಶ್ರಮವಿಭಾಗ ತತ್ವದ ಮೇಲೆಯೇ ಜಾತಿಗಳೂ ಕುಲಕಸಬುಗಳೂ ಹುಟ್ಟಿವೆ. ಬ್ರಿಟಿಶ ಕಾಲದ ಯಂತ್ರಯುಗದಲ್ಲಿ ಕಸಬುಗಳು ಕಣ್ಮರೆಯಾದುವು; ಭಾರತೀಯರು ಬಡವರಾದರು; ಹಳ್ಳಿಗರಂತೂ ಹೊಟ್ಟೆಗಿಲ್ಲದೆ ಕುಳಿತರು. ಭಾರತೀಯರ ಸರಾಸರಿ ಉತ್ಪನ್ನ ಎಂಬತ್ತು ರೂಪಾಯಿಗಳಿಗೆ ಮೀರಿಲ್ಲವೆಂದು ಅರ್ಥ ಶಾಸ್ತ್ರಜ್ಞರ ಅಭಿಪ್ರಾಯ. ಇದು ಕನಿಷ್ಠ ಪಕ್ಷಕ್ಕೆ ಮೂರುಪಟ್ಟಾದರೂ ಆಗಬೇಕು. ಎಂದರೆಯೇ ಭಾರತೀಯರು ಬದುಕಬಲ್ಲರು; ಅದಕ್ಕಾಗಿ ಸರಕಾರವೂ ಸಾಮಾಜಿಕರೂ ಕೂಡಿಯೇ ಹಳ್ಳಿ ಹಳ್ಳಿಗೆ ಕೈಗಾರಿಕೆಯ ಕೇಂದ್ರಗಳನ್ನು ತೆರೆಯಬೇಕು; ಹಳ್ಳಿಯ ಉದ್ಯೋಗಗಳಿಗೆ ಉತ್ತೇಜನ ಕೊಡಬೇಕು.

ಹಳ್ಳಿಗಳಲ್ಲಿ ಹೆಚ್ಚಾಗಿ ಇರುವವರೆಲ್ಲ ರೈತರು, ಮತ್ತು ಅವರನ್ನು ಅವಲಂಬಿಸಿ ಬದುಕುವ ಕೂಲಿಕಾರರು. ಇವರೆಲ್ಲರ ಏಳ್ಗೆಯಾಗಬೇಕಾದರೆ ಒಕ್ಕಲುತನ ಒಳಿತಾಗಬೇಕು. ಅದಕ್ಕಾಗಿ, ಬಡ ರೈತರಿಗೆ ಬೀಜ, ಗೊಬ್ಬರ, ಒಕ್ಕಲುತನದ ಸಲಕರಣೆಗಳು ಸರಕಾರ–ಸಾಮಾಜಿಕರ ನೆರವಿನಿಂದ ಸಕಾಲಕ್ಕೆ ಸಿಕ್ಕಬೇಕು. ಒಕ್ಕಲುತನದ ಶಾಸ್ತ್ರೀಯಜ್ಞಾನ ಒಕ್ಕಲಿಗರಿಗೆ ಆಗಬೇಕು. ಅವರು ಬೆಳೆದ ಸರಕಿಗೆ ಒಳಿತಾದ ಬೆಲೆ ಬರುವಂತಾಗಬೇಕು. ಈ ವ್ಯಾಪಾರಕ್ಕೆ ಅನುಕೂಲವಾಗುವಂತೆ ಹಳ್ಳಿಯ ಹಾದಿಗಳ ಸುಧಾರಣೆಯಾಗಬೇಕು. ಜನ–ದನ–ಬೆಳೆಗಳಿಗೆ ನೀರಿನ ಅನುಕೂಲತೆಯನ್ನು ಮಾಡಿ ಕೊಡಬೇಕಾದುದೂ ಗ್ರಾಮೋದ್ಧಾರದ ಒಂದು ರೀತಿಯೇ ಸರಿ.

ಹೀಗೆ ಹೊಟ್ಟೆ–ಬಟ್ಟೆಗಳ ಹಾದಿ ಮೊದಲು ಹಸನಾಗಲಿ. ಆಮೇಲೆ ಬುದ್ಧಿಯ ಬೆಳವಣಿಗೆಯ ಕಾರ್ಯಗಳನ್ನು ಕೈಕೊಳ್ಳಲು ಹಗುರಾಗುವುದು. ಅದಕ್ಕಾಗಿ ಒತ್ತಾಯದ ಪುಕ್ಕಟೆ ಶಿಕ್ಷಣ, ಪ್ರೌಢ ಶಿಕ್ಷಣ, ವಾಚನಾಲಯ ಮುಂತಾದವುಗಳನ್ನು ಹಳ್ಳಿಗರ ನೆರವಿನಿಂದಲೇ ಆರಂಭಿಸಬಹುದು. ಅವರು ಬುದ್ಧಿವಂತರಾದಂತೆ ತಮ್ಮ ಆರೋಗ್ಯ ಸಂರಕ್ಷಣೆಯನ್ನು ತಾವೇ ಮಾಡಿಕೊಳ್ಳುವರು. ಅತ್ಯಾವಶ್ಯಕ ಪ್ರಸಂಗಗಳಲ್ಲಿ ಮಾತ್ರ ಸರಕಾರ ವೈದ್ಯಕೀಯ ಸಾಹಾಯ್ಯವನ್ನು ಕೊಟ್ಟರೆ ಸಾಕಾದೀತು.

ಈ ಬಗೆಯಾದ ಕಾರ್ಯಕ್ರಮಗಳು ಸಾಧ್ಯವಿದ್ದಷ್ಟು ಬೇಗನೆ ಬಳಕೆಯಲ್ಲಿ ಬರಬೇಕು. ಆಗ ಮಾತ್ರವೇ ಹಳ್ಳಿಗಳು ದಿಳ್ಳಿಗಳಾದಾವು, ದಿಲ್ಲಿಯ ದೊರೆತನ ದೃಢವಾದೀತು, ಸಿಕ್ಕ ಸ್ವಾತಂತ್ರ್ಯ ದಕ್ಕೀತು.

## ಓರಣ

**ಮುಮ್ಮಾತು:** ಎಂದರೇನು ?— ಓರಣದ ಆರಂಭ ಯಾವಾಗ— ಉಪಯೋಗ— ಲಾಭ— ಮುಗಿದುದು.

ಭಾರತದಲ್ಲಿ ಬ್ರಿಟಿಶರು ಸುಮಾರು ಎರಡುನೂರು ವರುಷ ಸಾಮ್ರಾಜ್ಯವಾಳಿದರು. ಅದು ಕಾದಾಟದ ಕಲಿತನದಿಂದಲೂ ಅಲ್ಲ, ಶಾಸನಗಳ ಸತ್ತ್ವದಿಂದಲೂ ಅಲ್ಲ; ಕೇವಲ ಒಂದೇ ಒಂದು ಅಮೋಘವಾದ ಶಿಸ್ತಿನಿಂದ, ಎಂದು ಬಲ್ಲವರು ಹೇಳುವದುಂಟು. ಅದು ನಿಜವೂ ಅಹುದು. ಆ ಶಿಸ್ತನ್ನೇ ಓರಣವೆಂದು ಸಾಮಾನ್ಯವಾಗಿ ಹೇಳಬಹುದು. ಈ ಜಗತ್ತಿನಲ್ಲಿ ಹಿಂದಾಗಲಿ, ಇಂದಾಗಲಿ ಮಹಾಪುರುಷರೆನಿಸಿಕೊಂಡವರ ಬಾಳಿನಲ್ಲಿ ಓರಣವೇ ಒಡೆದು ಕಾಣುವ ಬೀಜಮಂತ್ರ.

ಹಾಗಾದರೆ ಓರಣ ಅಥವಾ ಶಿಸ್ತು ಎಂದರೇನು ? ಇದಕ್ಕೆ ಗುರಿಹೊಡೆದಂತೆ ವ್ಯಾಖ್ಯೆಯನ್ನು ಹೇಳುವುದು ಕಷ್ಟ. ಸುವ್ಯವಸ್ಥೆ, ಕಟ್ಟುನಿಟ್ಟು, ಹಿಡಿತಡೆ ಇವಾವವೂ ಓರಣದ ಅರ್ಥವನ್ನು ಸ್ಪಷ್ಟಮಾಡಲಾರವು. ಆದುದರಿಂದ ಒಳ್ಳೆಯ ಗುಣ ಅಥವಾ ಒಳ್ಳೆಯ ಚಟಗಳ ಸಂಕಲನವೇ ಶಿಸ್ತು ಅಥವಾ ಓರಣವೆಂದು ಹೇಳಬಹುದು. ನಡೆ ನುಡಿ, ಊಟ ಉಡಿಗೆ, ದಣಿವು ತಣಿವು, ಕೊಡುಕೊಳ್ಳಿ ಇವೆಲ್ಲವುಗಳಲ್ಲಿಯೂ ಸಮಯನಿಷ್ಠತೆ, ಸೌಮ್ಯ ಸ್ವಭಾವ, ಸ್ವಾವಲಂಬನ, ಸ್ವನಿಯಂತ್ರಣಗಳೆಲ್ಲವೂ 'ಇರುವುದೇ ಓರಣದ ಬಾಳು. ಅದಕ್ಕಾಗಿಯೇ ಅದನ್ನು ಸದ್ಗುಣಗಳ ಸಂಕಲನವೆಂದು ಮೇಲೆ ಹೇಳಿದೆ.

ಆದರೆ ಮನುಷ್ಯನ ಮನಸ್ಸು ಸಹಸಾ ಒಳ್ಳೆಯದರ ಕಡೆಗೆ ಹರಿಯುವುದಿಲ್ಲ. ಕೆಟ್ಟದರ ಕಡೆಗೇ ಅದರ ಒಲವು ಹೆಚ್ಚು. ಆದುದರಿಂದ ಓರಣವನ್ನು ಪ್ರಯತ್ನಪೂರ್ವಕವಾಗಿಯೇ ಕಲಿಯಬೇಕಾಗುವುದು. ಇದಕ್ಕೆ ಎಳೆತನವೇ ತಕ್ಕ ಕಾಲ. ಎಳೆ ಮಕ್ಕಳ ಮನಸ್ಸು ಮಡಿ ಮಾಡಿದ ಬಿಳಿಯ ಬಟ್ಟೆಯಿದ್ದಂತೆ. ಅದರ ಮೇಲೆ ಮೂಡಿಸಿದ ಗುರುತುಗಳು ನಿಚ್ಚಳವಾಗಿಯೇ ಮೂಡುವುವು; ಅಚ್ಚಳಿಯದೆ ಉಳಿಯುವುವು. ಮೂರು ವರುಷಗಳ ಬುದ್ಧಿ ನೂರು ವರುಷ

ಎಂದು ಹೇಳುವುದುಂಟು ಎಂದಮೇಲೆ ಎಳೆತನದಲ್ಲಿ ಕಲಿತ ಓರಣದ ಚಟ ಬಾಳಿನುದ್ದಕ್ಕೂ ಹಾಸುಹೊಕ್ಕಾಗಿ ಹೊಂದಿಕೊಳ್ಳುವುದೆಂದು ಬೇರೆಯಾಗಿ ಹೇಳುವ ಆವಶ್ಯಕತೆಯಿಲ್ಲ.

ಇಂತಹ ಸದ್ಗುಣದ ಸಂಕಲನವಾದ ಓರಣ ವ್ಯಕ್ತಿವ್ಯಕ್ತಿಗೂ ಬೇಕು; ಮನೆಮನೆಗೂ ಬೇಕು; ಸಂಘಸಂಸ್ಥೆಗಳಲ್ಲಿಯಂತೂ ಅತ್ಯವಶ್ಯ. ಏಕೆಂದರೆ, ಅಲ್ಲಿ ಹಲವಾರು ಮನಃ ಪ್ರವೃತ್ತಿಯ ವ್ಯಕ್ತಿಗಳು ಕೂಡಿರುತ್ತವೆ ಸಭಾಸಮಾರಂಭಗಳಲ್ಲಿ ಓರಣವಿದ್ದರೇ ಆರಂಭಿಸಿದ ಕಾರ್ಯ ಅಂತ್ಯವನ್ನು ಕಾಣುವುದು. ಹಾಗಿಲ್ಲವಾದರೆ ಕಚೇರಿ ಕಟ್ಟಿಯನ್ನು ಏರುವ ಪ್ರಸಂಗ ಗಳೂ ಪ್ರಸ್ಥಾಪಿತವಾಗುವುವು.

ಈಗಂತೂ ಈ ಶಿಸ್ತು ಸಂಯಮಗಳ ಆವಶ್ಯಕತೆ ಅತ್ಯಂತವಾಗಿದೆ. ನಮ್ಮ ಜೀವನವೇ ಕೇವಲ ಯಾಂತ್ರಿಕ ರೀತಿಯಲ್ಲಿ ಸಾಗಬೇಕಾಗಿದೆ. ಹೊಟ್ಟೆಯ ಹೋರಾಟಿಕ್ಕಾಗಿ ನೆಲೆ ಯಿಲ್ಲದೆ ಎಲ್ಲಿ ಬೇಕಾದಲ್ಲಿ ಥೈ ಎಂದು ನಿಲ್ಲಬೇಕು. ಆದುದರಿಂದ, ರೈಲು ನಿಲ್ದಾಣ, ಮೋಟರು ನಿಲ್ದಾಣ, ಪ್ರದರ್ಶನ ಮಂದಿರಗಳ ಮುಂದೆ ಸರತಿಯ ಸಾಲಿನ ( ಕ್ಯೂ ) ಶಿಸ್ತನ್ನು ಕಾಯ್ದುಕೊಳ್ಳಲೇ ಬೇಕು; ಎಂದರೆಯೇ ನಮ್ಮ ಕೆಲಸ ಸಕಾಲಕ್ಕೆ ಕೈಗೂಡು ವುದು. ಇದರಂತೆ ಸಿನೇಮಾ–ನಾಟಕ ಥಿಯೇಟರು ಮುಂತಾಗಿ ಮನೋರಂಜಕ ಪ್ರಸಂಗ ಗಳಲ್ಲಿಯೂ, ದೇವದರ್ಶನ ಮುಂತಾದ ಉತ್ಸವ ಪ್ರಸಂಗಗಳಲ್ಲಿಯೂ ಶಿಸ್ತಿನ ಸದುಪಯೋಗ ವಾಗುತ್ತಿದೆ.

ಈ ಸಂಸಾರವೊಂದು ಸಮರಾಂಗಣ. ಸಮರಾಂಗಣದಲ್ಲಿ ಶಿಸ್ತಿನ ಸೈನಿಕರೇ ಗೆಲುವಿನ ಮಾಲೆಯನ್ನು ಪಡೆಯುವರು. ಎಂದಮೇಲೆ ಈ ಸಂಸಾರದಲ್ಲಿಯೂ ಸುಖ-ಶಾಂತಿ-ಸಮೃದ್ಧಿ ಯನ್ನು ಕಾಣಬೇಕಾದರೆ ಓರಣ ಆವಶ್ಯವೆಂದು ಬೇರೆಯಾಗಿ ಹೇಳಬೇಕೇ ?

## ೩. ಗಾದೆಯ ಮಾತುಗಳು

## ಬಿತ್ತಿದುದನ್ನು ಬೆಳೆದುಕೊಳ್ಳು

**ಮುಖ್ಯ ಮಾತುಗಳು:** ವಾಚ್ಯಾರ್ಥ—ಲಕ್ಷಣಾರ್ಥ—ಬಳಕೆಯಲ್ಲಿ ಬಂದಿತೇಕೆ— ಉದಾಹರಣೆಗಳು— ಮುಗಿತಾಯ.

ಬಿತ್ತಿದುದನ್ನು ಬೆಳೆದುಕೊಳ್ಳು, ಎಂಬುದು ಗಾದೆಯ ಮಾತು, ಅನುಭವವೇದ. ಯಾವನು ಯಾವ ಬೀಜವನ್ನು ಬಿತ್ತುವನೋ ಅದೇ ಜಾತಿಯ ಬೆಳೆಯನ್ನೇ ಹೊಂದುವ. ಇದೇ ಗಾದೆಯ ವಾಚ್ಯಾರ್ಥ.

ಈ ಮಾತನ್ನು ಸಂಸಾರಕ್ಕೆ ಅನ್ವಯಿಸಿ ಹೇಳಬಹುದಾದರೆ— ಮನುಷ್ಯ ತನ್ನ ಒಳ್ಳೆಯ ಕೆಲಸಕ್ಕೆ ಒಳ್ಳೆಯ ಫಲವನ್ನೂ ಕೆಟ್ಟ ಕೆಲಸಕ್ಕೆ ಕೆಟ್ಟ ಫಲವನ್ನೂ ಪಡೆಯಬೇಕಾಗುವುದು, ಎಂಬುದೇ ಲಕ್ಷಣಾರ್ಥ. ಇದನ್ನೇ ಶ್ರೀ ಬಸವೇಶ್ವರರು “ಅಯ್ಯಾ ಎಂದಡೆ ಸ್ವರ್ಗ, ಎಲವೋ ಎಂದಡೆ ನರಕ” ಎಂದು ಸೂತ್ರರೂಪದಲ್ಲಿ ಹೇಳಿದ್ದಾರೆ. ಮನಸ್ಸೇ ಮಹಾದೇವ, ಭಾವದಂತೆ

ದೇವ, ಮಾಡಿದ್ದುಣ್ಣೋ ಮಹಾರಾಯಾ ಎಂಬ ಮಾತುಗಳೂ ಈ ಗಾದೆಯ ಮಾತನ್ನೇ ಬೆಂಬಲಿಸುತ್ತಿವೆ.

ಈ ಗಾದೆಯ ಮಾತು ಬಳಕೆಯಲ್ಲಿ ಹೇಗೆ ಬಂದಿತೆಂಬುದಕ್ಕೆ ನಿಸರ್ಗವೇ ಉತ್ತರವನ್ನು ಕೊಡುವುದು. ಮಾವಿನ ಬೀಜದಿಂದ ಮಾವಿನ ಫಲವೂ, ಬೇವಿನ ಬೀಜದಿಂದ ಬೇವಿನ ಫಲವೂ ಸಿಕ್ಕುವುದು. ಬೇವು ಬಿತ್ತಿ ಮಾವನ್ನು ಬೆಳೆದವರಾರೂ ಇಲ್ಲ. ಇದೇ ನಿಸರ್ಗ ನಿಯಮ. ಬಾಳಿನ ಒಳಿತು ಕೆಡಕುಗಳಿಗೆ ಹೊಂದಿಕೆಯಾಗಿದೆ. ಅದನ್ನು ತಿಳಿದು ನಡೆಯ ಬೇಕೆಂಬುದೇ ನಾವು ಈ ಗಾದೆಯಿಂದ ಕಲಿಯಬೇಕಾದ ಪಾಠ.

ತನಗೆ ಹಿತವಾಗಬೇಕೆಂದು ಎಲ್ಲರೂ ಬಯಸುವವರೇ. ಹಾಗಿದ್ದರೆ ಹೆರವರಿಗೆ ಹಿತ ಮಾಡುವುದನ್ನು ಮೊದಲು ತಾನು ಕಲಿಯಬೇಕು. ಗಂಡನಿಗೆ ಹಿತವಾಗಲೆಂದು ಹೆಂಡಿತಿ ಅಡಿಗೆ ಮಾಡಿದರೆ ಅದರ ಅಂಶವಾದರೂ ಆಕೆಗೆ ದೊರೆಯಲೇ ಬೇಕಲ್ಲವೇ ? ಹಾದಿಕಾರರ ಹಿತಕ್ಕಾಗಿ ದಾರಿಯದ್ದಕ್ಕೂ ಗಿಡಗಳನ್ನು ನೆಟ್ಟರೆ, ಅವುಗಳ ನೆರಳು ಆತನಿಗೂ ಒಮ್ಮಿಲ್ಲೊಮ್ಮೆ ಸಿಕ್ಕಲೇಬೇಕಷ್ಟೇ ?

ಇವಕ್ಕೆ ವಿರುದ್ಧವಾಗಿ, ಒಬ್ಬರ ಮೋರೆಗೆ ಮಸಿ ಹಚ್ಚಬೇಕೆಂದರೆ ಮೊದಲು ತನ್ನ ಕೈ ಕರ್ರಗೆ ಮಾಡಿಕೊಳ್ಳಬೇಕಾಗುವುದು. ಹಾಯ್ದಾಡುವ ಹಾದಿಯಲ್ಲಿ ಮುಳ್ಳನ್ನು ಹರವಿದರೆ, ಅವು ಒಮ್ಮಿಲ್ಲೊಮ್ಮೆ ಅವನ ಕಾಲನ್ನೂ ನೋಯಿಸುವುವು.

ಹೀಗೆ ಒಳಿತಿನಿಂದ ಒಳಿತು, ಕೆಡುಕಿನಿಂದ ಕೆಡುಕು ಎಂಬುದಕ್ಕೆ ನಮ್ಮ ಪುರಾಣ ಪುಣ್ಯಕತೆಗಳಲ್ಲಿ ಬೇಕಾದಷ್ಟು ಉದಾಹರಣೆಗಳು ಸಿಕ್ಕುವುವು. ತಮ್ಮ ಸತ್ಕೃತಿಗಳಿಂದ ಜೀವಂತ ಸ್ವರ್ಗಕ್ಕೆ ಹೋದವರೂ ಉಂಟು; ತಮ್ಮ ದುಷ್ಕೃತಿಗಳಿಂದ ನರಕದ ಹುಳುವಾದ ವರೂ ಉಂಟು. ಇದಕ್ಕೆ ದೈವವಾಗಲಿ ದೇವರಾಗಲಿ ಯಾರೂ ಹೊಣೆಯಲ್ಲ. ಮಾನವನ ಸತ್ಕೃತಿ ದುಷ್ಕೃತಿಗಳೇ ಅವನ ಏಳುಬೀಳುಗಳಿಗೆ ಕಾರಣ ಆದುದರಿಂದಲೇ, 'ಮನೋವಾಕ್ಕಾಯಗಳಿಂದ ಪರಿಶುದ್ಧನಾಗಿರು' ಎಂದು ಎಲ್ಲ ಧರ್ಮೋಪದೇಶಕರೂ ಸಾರಿದ್ದಾರೆ. ಪ್ರೇಮವೇ ಈ ಜಗತ್ತಿನ ಬೆಡಗಿನ ಬೀಜ. "Love begets love" ಎಂಬುದು ಅದನ್ನೇ ಹೇಳುತ್ತಿದೆ. "ಶಠಂ ಪ್ರತಿ ಸತ್ಯಂ" ಎಂಬುದು ಮಹಾತ್ಮರ ಮುಖ್ಯ ಮಂತ್ರ.

ಈ ಎಲ್ಲ ಮಾತುಗಳ ಅರಿವಿನಲ್ಲಿ ಅತ್ಯಂತ ಆನಂದವೂ ಮರೆವಿನಲ್ಲಿ ಮಹಾವಿಪತ್ತೂ ಒದಗುವುದು ನಿಸ್ಸಂದೇಹ. ಏಕೆಂದರೆ ಆಳಾಗಲಿ ಅರಸಾಗಲಿ, ಬಿತ್ತಿದುದನ್ನು ಬೆಳೆದು ಕೊಳ್ಳಬೇಕಾಗುವುದು ಸೃಷ್ಟಿಯ ಸತ್ಯಸಿದ್ಧಾಂತ.

## ೪. ಕಲ್ಪನಾ ವಿಲಾಸ

## **ನಾನು ಭಾರತದ ಮುಖ್ಯ ಮಂತ್ರಿಯಾಗಿದ್ದರೆ........**

ಪ್ರಾಸ್ತಾವಿಕ— ಪ್ರಜಾಭಿಪ್ರಾಯಕ್ಕಾಗಿ ಪ್ರಯಾಣ— ಆರ್ಥಿಕ, ಔದ್ಯೋಗಿಕ, ಶಾರೀರಿಕ, ಶೈಕ್ಷಣಿಕ ಸುಧಾರಣೆ— ನಾಗರಿಕ ವಿತ್ತಜೀವಿತ ಸಂರಕ್ಷಣ— ಶಾಂತಿ ಸಮೃದ್ಧಿ ಯೋಜನೆಗಳು— ಮುಗಿತಾಯ.

ನಾನು ಭಾರತದ ಮುಖ್ಯ ಮಂತ್ರಿಯಾಗಿದ್ದರೆ....? ಇದು ಸುಲಭವಾಗಿ ಒಡೆಯತಕ್ಕ ಒಗಟಲ್ಲ. Uneasy lies the head that wears the crown. ಎಂದರೆ, 'ಬಂಗಾರದ ಕಿರೀಟವನ್ನುಳ್ಳ ತಲೆಗೆ ಬೆಂಕಿ ಹತ್ತಿದಂತೆ' ಎಂಬುದು ನನಗೆ ಗೊತ್ತಿದೆ. ಹಿರಿತನದ ಹೆಚ್ಚಳದಲ್ಲಿ ಹೊಣೆಗಾರಿಕೆಯೂ ಹೆಚ್ಚು. ಈಗಂತೂ ಪ್ರಜಾಪ್ರಭುತ್ವದ ಕಾಲ. ಮುಖ್ಯ ಮಂತ್ರಿಯೆಂದರೆ ಜನತೆಯ ದಾಸಾನುದಾಸ ಎಂದು ಅರ್ಥ. ಎಂದಮೇಲೆ ಆಳಾದವನು ಒಡೆಯರ ಒಳಿತಿಗಾಗಿ ತನ್ನ ಮೈಮನಗಳನ್ನು ಮನದಣಿ ದುಡಿಸಲೇಬೇಕು. ಈ ದೃಷ್ಟಿಯಲ್ಲಿ ನನ್ನ ಕರ್ತವ್ಯಗಳೆಂದರೆ:

ಮೊದಲನೆಯದಾಗಿ: ನನ್ನ ಮತದಾರರ ನಂಬಿಕೆಯನ್ನು ಉಳಿಸಿಕೊಳ್ಳುವುದೂ ಈಗ ಭಾರತ ಮಂತ್ರಿಯಾಗಿರುವುದರಿಂದ ಪ್ರಜೆಗಳೆಲ್ಲರ ಪ್ರೇಮವನ್ನು ಗಳಿಸಿಕೊಳ್ಳುವುದೂ ನನ್ನ ಅವಶ್ಯ ಕರ್ತವ್ಯ. ಅದಕ್ಕಾಗಿ ದೇಶದಾದ್ಯಂತ ಸಂಚರಿಸುವೆ, ಎಲ್ಲರ ಆಶೆ ಆಕಾಂಕ್ಷೆಗಳನ್ನು ತಿಳಿದುಕೊಳ್ಳುವೆ. ಅವುಗಳಲ್ಲಿ ಅತ್ಯಾವಶ್ಯಕವಾದವುಗಳನ್ನೂ ಸುಲಭಸಾಧ್ಯವಾದವುಗಳನ್ನೂ ಸಾರ್ವತ್ರಿಕವಾದವುಗಳನ್ನೂ ಆಯ್ದು ನಿರ್ಣಯಿಸಿಕೊಳ್ಳುವೆ.

ಸ್ವಾತಂತ್ರ್ಯದ ಸೌಖ್ಯವನ್ನು ಅನುಭವಿಸಲು ಎಲ್ಲರೂ ಬದುಕಲೇಬೇಕು. ಸವಿಬದುಕಿಗೆ ಹೊಟ್ಟೆಬಟ್ಟೆಗಳ ಅನುಕೂಲತೆ ಅತ್ಯವಶ್ಯ. ಅದಕ್ಕಾಗಿ ಕಾಳುಕಡಿ, ಹತ್ತಿಗಳನ್ನು ಹೆಚ್ಚಾಗಿ ಬೆಳೆಯುವಂತೆ ಯೋಜನೆ ಮಾಡುವೆ. ಒಕ್ಕಲಿಗರಿಗೆ ಸಕಾಲಕ್ಕೆ ಸರ್ವಸಲಕರಣೆಗಳನ್ನು ಒದಗಿಸುವೆ. ಬಂಜೆ ಭೂಮಿಯಲ್ಲಿಯೂ ಬೆಳೆ ಬರುವಂತೆ ನೀರಾವರಿ ಯೋಜನೆ ಮಾಡುವೆ. ಬೆಳೆದ ಮಾಲಿನ ಸಾಗಾಟಕ್ಕಾಗಿ ಹಳ್ಳಿಹಳ್ಳಿಗೂ ಯೋಗ್ಯ ಹಾದಿಗಳನ್ನು ಸಿದ್ಧಪಡಿಸುವೆ. ಒಳದೇಶದಲ್ಲಿ ಒಕ್ಕಲುತನದ ಸರಕಿನ ಮೇಲಿನ ಸುಂಕವನ್ನು ತೆಗೆಯುವೆ; ಎಲ್ಲರಿಗೂ ಅಗ್ಗಳತೆಯಲ್ಲಿ ಹೊಟ್ಟೆಬಟ್ಟೆಗಳ ಅನುಕೂಲತೆಗಳನ್ನು ಅಳವಡಿಸುವೆ. ಒಕ್ಕಲಿಗರಿಗೆ ಒಡೆತನದ ಭೂಮಿಯನ್ನು ಕೊಡಿಸುವುದೂ ಅವರ ಸಾಲ ಪರಿಹಾರ ಮಾಡುವುದೂ ಅಗ್ಗಬಡ್ಡಿಯಂತೆ ಹಣವನ್ನು ಕೊಡಿಸುವುದೂ ನನ್ನ ಹೊಣೆಗಾರಿಕೆಯ ಕ್ಷೇತ್ರದಲ್ಲಿಯೇ ಬರುವುವು.

ಇಷ್ಟಾಯಿತೆಂದರೆ, ಉಳಿದ ಕೈಗಾರಿಕೆಗಳನ್ನು ಕುದುರಿಸುವಂತೆ ಕಲಾಕುಶಲರ ಉದ್ಧಾರವನ್ನು ಕೈಕೊಳ್ಳುವೆ. ಸಾಧ್ಯವಿದ್ದರೆ, ಉದ್ಯೋಗಗಳನ್ನು ರಾಷ್ಟ್ರೀಕರಣ ಮಾಡುವೆ; ಕಾರ್ಮಿಕರಿಗೆ ಶಕ್ಯವಿದ್ದಷ್ಟು ಪ್ರೋತ್ಸಾಹ ಕೊಡುವೆ. ಅವರ ಮೇಲೆ ಈಗಿರುವ ಅನಾವಶ್ಯಕ ಕರಕಂದಾಯಗಳನ್ನು ಕಿತ್ತು ಹಾಕುವೆ.

ಜನರ ಆರೋಗ್ಯವನ್ನು ಕಾಯುವುದೂ ಮಂತ್ರಿಯ ಹೊಣೆಗಾರಿಕೆಯೇ ಅಹುದು. ಅದಕ್ಕಾಗಿ ಎಲ್ಲ ಬಗೆಯ ಉಪಚಾರದ ಔಷಧಾಲಯಗಳು, ಒಳದೇಶದಲ್ಲಿಯೇ ಔಷಧದ ಕಾರಖಾನೆಗಳು, ದೀನದರಿದ್ರರಿಗಾಗಿ ಪುಕ್ಕಟೆ ರುಗ್ಣಾಲಯಗಳು, ಮತ್ತೆ ಕೆಲವು ಚರ ಔಷಧಾಲಯಗಳು, ಹೀಗೆಯೇ ಸಾಧ್ಯವಿದ್ದ ಅನುಕೂಲತೆಗಳನ್ನು ಏರ್ಪಡಿಸುವೆ.

ಆಮೇಲೆ ಶಿಕ್ಷಣ ಪ್ರಚಾರ, ಆರ್ಥಿಕ, ಆರೋಗ್ಯ ಅಭಿವೃದ್ಧಿಯಾದ ಮೇಲೆ ಅವರ ನೆರವಿನಿಂದಲೇ ಶಿಕ್ಷಣ ಸಂಸ್ಥೆಗಳನ್ನು ನಡೆಸಬಹುದು. ಅವಶ್ಯವೆನಿಸಿದ ಮಟ್ಟಿಗೆ ಸರಕಾರದಿಂದ ಸಾಹಾಯ್ಯವನ್ನೂ ಒದಗಿಸುವೆ. ಹುಡುಗರಿಗೆ ಹಿರಿಯರಿಗೆ ಹೆಣ್ಣುಮಕ್ಕಳಿಗೆ ಶಿಕ್ಷಣ ಸಂಸ್ಥೆಗಳು ಬೇರೆ ಬೇರೆ ಬೇಕು: ಅಲ್ಲಿ ಮಾತ್ರ, ಬರಿಯ ಓದು ಬರೆಹವಷ್ಟೇ ನಡೆಯಲಾರದು; ಜೀವನಾವಶ್ಯಕ ವಿಷಯಗಳ ಶಿಕ್ಷಣವನ್ನು ಏರ್ಪಡಿಸುವೆ.

ಕೊನೆಯದಾಗಿ ಶಾಂತಿ-ಸಂರಕ್ಷಣ. ಅದಕ್ಕಾಗಿ ಸೈನಿಕ ಸಿಬ್ಬಂದಿಯ ವ್ಯವಸ್ಥೆ ಮಾಡುವೆ. ಅದರೊಡನೆ ನಾಗರಿಕರಿಗೆ ಸೈನ್ಯಶಿಕ್ಷಣ ಕೊಡಿಸುವೆ.

ಇನ್ನುಳಿದುದು ಮನೋರಂಜನ ವಿಷಯ. ಅದಕ್ಕಾಗಿ ರೇಡಿಯೋ, ಚಲಚ್ಚಿತ್ರ, ಸಾರ್ವಜನಿಕ ಉಪವನಗಳ ವ್ಯವಸ್ಥೆಯನ್ನು ಮಾಡಿಸುವೆ. ಇಷ್ಟೆಲ್ಲ ನನ್ನ ಆಶೋತ್ತರಗಳು ಕೈಗೂಡಬೇಕಾದರೆ, ಪ್ರಜೆಗಳ ಸಹಕಾರ ಬೇಕೇ ಬೇಕೆಂಬುದನ್ನು ಎಲ್ಲರೂ ನೆನಪಿಡಬೇಕು. ಹಾಗಾದರೆಯೇ, ನಾನು ಭಾರತದ ಮುಖ್ಯ ಮಂತ್ರಿಯಾದರೆ............ ? ಎಂಬ ಒಗಟು ಒಡೆಯಬಲ್ಲುದು.

## ೫. ವಾದವಿವಾದ

## ವಿಜ್ಞಾನವೋ ಸಾಹಿತ್ಯವೋ ?

ವಿಷಯಾರಂಭ: ವಿಜ್ಞಾನವೆಂದರೇನು ? — ಸಾಹಿತ್ಯವೆಂದರೇನು ? — ವಿಜ್ಞಾನಿಯ ಜೀವನ— ಸಾಹಿತ್ಯಿಯ ಜೀವನ— ವಿಜ್ಞಾನದಿಂದ ಲಾಭ ಮತ್ತು ಹಾನಿ— ಸಾಹಿತ್ಯದಿಂದ ಲಾಭ ಮತ್ತು ಹಾನಿ— ಶಾರೀರಸಂವರ್ಧನ ಹೃದಯದ ಹಿಗ್ಗುಗಳಲ್ಲಿ ಅವಶ್ಯವಾವುದು— ಮುಗಿತಾಯ.

ಮಾನವನ ಸವಿಬದುಕಿಗೆ ಅತ್ಯವಶ್ಯವಾದ ಸಂಗತಿಗಳು ಎರಡು: ಒಂದು, ಭೌತಿಕದ ಬೆಂಬಲ; ಎರಡು ಆಧ್ಯಾತ್ಮದ ಆಧಾರ. ಒಂದಕ್ಕೆ ವಿಜ್ಞಾನವೇ ತಳಹದಿ; ಮತ್ತೊಂದಕ್ಕೆ ಸಾಹಿತ್ಯವೇ ಬುನಾದಿ. ಒಂದರಿಂದ ದೊರೆಯುವುದು ಶಾರೀರಿಕ ಸೌಖ್ಯ; ಮತ್ತೊಂದರಿಂದ ಮೂಡುವುದು ಹೃದಯದ ಹಿಗ್ಗು. ವಸ್ತುತಃ ವಿಚಾರಮಾಡಿದರೆ, ವಿಜ್ಞಾನ ಸಾಹಿತ್ಯಗಳೆರಡೂ ಮಾನವನ ಎರಡು ಕಣ್ಣುಗಳು, ಹಕ್ಕಿಯ ಎರಡು ರೆಕ್ಕೆಗಳು. ಅವು ಪರಸ್ಪರ ಪೂರಕವಾಗಿಯೇ ಇವೆ; ಹಾಗೆಯೇ ಇರಬೇಕು, ಆದರೆ ವಿಜ್ಞಾನ ಇಂದು ಜಗತ್ತಿನ ವಿನಾಶಕ್ಕೂ, ಸಾಹಿತ್ಯ ಬಾಳಿನ ಬೆಳವಣಿಗೆಗೂ ಕಾರಣವಾಗುತ್ತಲಿವೆ. ಎಂತೆಯೇ ವಿಜ್ಞಾನವೋ ಸಾಹಿತ್ಯವೋ ಎಂಬುದು ವಿವಾದ ವಿಷಯವಾಗಿದೆ. ಇದರ ನಿರ್ಣಯ ಕೊಡುವ ಮೊದಲು ಆ ಆ ವಿಷಯಗಳ ವಿವರಗಳನ್ನು ನೋಡಬೇಕಾಗುವುದು.

ವಿಜ್ಞಾನವೆಂದರೆ ಈ ಸೃಷ್ಟಿಯಲ್ಲಿ ಸ್ವಾಭಾವಿಕವಾಗಿರುವ ಪದಾರ್ಥ ಮತ್ತು ಶಕ್ತಿಗಳ ಅಂತರಂಗವನ್ನು ಅರಿಯುವುದು ಈ ವಿಜ್ಞಾನದಿಂದ ಮನುಷ್ಯ ನಿಸರ್ಗವನ್ನು ನಿಯಂತ್ರಿಸ

ಬಲ್ಲ, ಜೀವನಾವಶ್ಯಕತೆಗಳನ್ನು ಜೊತೆಗೂಡಿಸಬಲ್ಲ. ತಿಂದುಂಡು ಹಾಯಾಗಿ ಕಾಲವನ್ನು ಕಳೆಯಬಲ್ಲ, ಇಷ್ಟೇ.

ಸಾಹಿತ್ಯವೆಂದರೆ, ಬುದ್ಧಿಯ ಬಲ, ಹೃದಯದ ಹಿಗ್ಗುಗಳಿಗೆ ಕಾರಣವಾಗುವ, ಸಂಸ್ಕೃತಿಯನ್ನು ಸಂವರ್ಧಿಸುವ, ಸತ್ಯದ ಸವಿನುಡಿಗಳ ಜ್ಞಾನ. ಇದರಿಂದ ಭೌತಿಕ ಭಾಗ್ಯ ದೊರೆಯುವುದೋ ಇಲ್ಲವೋ! ಆಧ್ಯಾತ್ಮಿಕ ಅಥವಾ ಅತ್ಯಂತಿಕ ಆನಂದ ಮಾತ್ರ ತಪ್ಪಿದು ದಲ್ಲ. ಈ ಸಾಹಿತ್ಯದ ಶಬ್ದಾರ್ಥಗಳನ್ನು ಕಾಳಿದಾಸಕವಿ "ವಾಗರ್ಥಾವಿವ ಸಂಪೃಕ್ತೌ...." ಎಂದು ಪಾರ್ವತೀ ಪರಮೇಶ್ವರರಿಗೆ ಹೋಲಿಸಿದ್ದಾನೆ. ಸಾಹಿತ್ಯದ ಶ್ರೇಷ್ಠತೆಯನ್ನು ಇದಕ್ಕಿಂತ ಹೆಚ್ಚಾಗಿ ಹೇಳಬೇಕೇ? ಇಂತಹ ದೈವಿಕ ಕೃಪೆಯುಳ್ಳವನು ಭೂಮಿಯ ಬಾಳಿಗೊಂದು ಬೆಲೆಯನ್ನು ಕೊಡಬಹುದೇ?

ಈ ಸಂಕ್ಷಿಪ್ತ ವಿವೇಚನೆಯಿಂದ, ವಿಜ್ಞಾನಕ್ಕಿಂತ ಸಾಹಿತ್ಯವೇ ಶ್ರೇಷ್ಠವಾದುದೆಂದು ತೋರುವಂತಿದೆ. ಇದನ್ನೇ ಇನ್ನಷ್ಟು ಆಳವಾಗಿ ನೋಡೋಣ.

ವಿಜ್ಞಾನಿಯ ಜೀವನದಲ್ಲಿ ಭೌತಿಕದೊಡನೆ ಬಡಿದಾಟವೇ ಮುಖ್ಯ. ಆ ಪ್ರಯತ್ನದಲ್ಲಿ ಆತನೊಮ್ಮೆ ಯಶಸ್ಸು ಪಡೆಯುವನು. ಆಗ ಆತನ ಹಿಗ್ಗು ಮುಗಿಲಿನಾಚೆಗೂ ಹೋಗ ಬಹುದು. ಆದರೆ ಅದು ಕ್ಷಣಿಕ. ಏಕೆಂದರೆ ಆತನ ವಿಜ್ಞಾನ ಶೋಧನೆ ಮಾನವನಿಗೆ ತಾರ ಕವೂ ಆಗಬಹುದು, ಮಾರಕವೂ ಆಗಬಹುದು. ಯಂತ್ರಗಳು ಮಾನವನ ಬಾಳಿಗೆ ಸುಗ ಮತೆಯನ್ನು ಒದಗಿಸಿ ಕೊಟ್ಟಿವೆ. ಆದರೆ ಅದೇ ವಿಜ್ಞಾನದ ಮರಿಗಳಾದ ಅಣುಬಾಂಬು, ಬಗೆಬಗೆಯ ವಿನಾಶಿಕೆಗಳು ಬಾಳಿಗೆ ಬಡಿಗುಂಡನ್ನು ಬೀರುತ್ತಿವೆ. ಎಂದಮೇಲೆ ವಿಜ್ಞಾನವು ಮಾನವನಿಗೆ ತಾರಕವೋ ಮಾರಕವೋ ಏನೆಂದು ಹೇಳಬೇಕು? ಈಗ ವಿಜ್ಞಾನದ ಪ್ರಗತಿ ಯನ್ನುಳ್ಳ ರಾಷ್ಟ್ರಗಳು ವಿಶ್ವದ ಶಾಂತಿಯನ್ನೇ ಕದಡುತ್ತಿವೆ. ಇದಕ್ಕೆ ಕಾರಣವಾವುದು?

ಸಾಹಿತ್ಯದ ಮಾತು ಹೀಗಿಲ್ಲ. ಬಹಳವಾದರೆ, ಸಾಹಿತ್ಯಿ ತನ್ನೊಬ್ಬನ ಮಟ್ಟಿಗೆ ಅವ್ಯ ವಸ್ಥಿತ ಜೀವಿಯಾಗಬಹುದು, ಬಾಳಿನ ಬೇಕು ಬೇಡಗಳನ್ನು ಮರೆಯಬಹುದು. ಆದರೆ ಆತನ ಸಾಹಿತ್ಯ ಸೃಷ್ಟಿ ಇಡಿಯ ಜಗತ್ತನ್ನೇ ಬಡಿದೆಬ್ಬಿಸುವುದು, ಪ್ರಗತಿಪಥದಲ್ಲಿ ನಾಗಾಲೋಟದಿಂದ ಓಡಿಸುವುದು. ಸತ್ಯದ ಸತ್ತ್ವವನ್ನುಳ್ಳ ಸಾಹಿತ್ಯದಲ್ಲಿ ವಿಶ್ವದ ಕಲ್ಯಾಣವೇ ಇದೆ; ಹೊರ ತಾಗಿ, ಯಾರಿಗೂ ಅಪಾಯವಿಲ್ಲ. ಈ ಕಾರಣದಿಂದಲೇ ಸಾಹಿತ್ಯಸಮ್ರಾಟರಿಗೆ ಯಾವ ದೇಶದಲ್ಲಿಯೂ ಮಿಗಿಲಾದ ಮನ್ನಣೆಯಿದೆ; ವಿಶ್ವದಲ್ಲಿಯೇ ಅವರ ಕೀರ್ತಿ ದುಮುದುಮಿಸುತ್ತಿದೆ.

ಈ ವಿವರಣೆಯಿಂದ ತಿಳಿಯುವುದೇನು? ವಿಜ್ಞಾನ ಬಲದಿಂದ ಮಾನವನು ದಾನವ ಲೋಕದ ಕಡೆಗೂ, ಸಾಹಿತ್ಯಬಲದಿಂದ ಮಾನವನು ಮಹೇಶ್ವರ ಲೋಕದ ಕಡೆಗೂ ಸಾಗುತ್ತಾನೆಂದು ಸ್ವಲ್ಪದರಲ್ಲಿ ಹೇಳಬಹುದು. ಭೂಮಿಯ ಬದುಕು ಸವಿಯಾಗಬೇಕಾದರೆ ವಿಜ್ಞಾನ ಅದಕ್ಕೆ ಭೌತಿಕ ಅನುಕೂಲತೆಗಳನ್ನು ಒದಗಿಸಬಹುದು; ಆದರೆ ಅದರಿಂದ ಹೃದಯ ಸಂಸ್ಕಾರಕ್ಕೆ ಹೆಚ್ಚಾಗಿ ಸಹಾಯವಿಲ್ಲ. ಸಾಹಿತ್ಯ ಹೃದಯದ ಹಿಗ್ಗು, ಬುದ್ಧಿಯ ಬೆಡಗು

ಗಳಿಂದ ಬಾಳಿನ ಬವಣೆಗಳನ್ನು ಲೆಕ್ಕಕ್ಕೇ ತರುವುದಿಲ್ಲ. ಸಾಹಿತ್ಯದಿಂದ ಸಿದ್ಧವಾಗುವ ಶೀಲಶುದ್ಧ ಪವಿತ್ರಾಚರಣೆಯ ಆನಂದ, ವಿಜ್ಞಾನದಿಂದ ಸಿಕ್ಕುವ ಸವಿತುತ್ತಿನಲ್ಲಿಲ್ಲ. ವಿಶ್ವದ ಕಲ್ಯಾಣವೆಲ್ಲ ಹೃದಯಸಂಸ್ಕಾರದಲ್ಲಿದೆ, ಹೊರತಾಗಿ ಸಂಪತ್ತಿನ ಸಂಗ್ರಹದಲ್ಲಿಲ್ಲ. ಆದುದ ರಿಂದ ವಿಜ್ಞಾನಕ್ಕಿಂತ ಸಾಹಿತ್ಯವೇ ಶ್ರೇಷ್ಠವಾದುದೆಂದರೆ ತಪ್ಪಾಗಲಾರದು.

**ತಿಳಿವಳಿಕೆ:** ನಿಬಂಧ ಲೇಖನದ ಬಗೆಗೆ ಮೊದಲಿನ ಹೊತ್ತಗೆಗಳಲ್ಲಿ ಸಾಮಾನ್ಯವಾಗಿ ಹೇಳಿದೆ. ಅವೇ ಮಾತುಗಳೇ ಇಲ್ಲಿಯೂ ಅನ್ವಯಿಸುವುವು. ಅವು ಮರೆತಿದ್ದರೆ ಮತ್ತೊಮ್ಮೆ ನೋಡಿಕೊಳ್ಳಿರಿ.

ಈ ಹೊತ್ತಗೆಯಲ್ಲಿ ಚಿಂತನಪರ ( Reflective ) ನಿಬಂಧಗಳ ಪರಿಚಯವನ್ನು ಹೊಸದಾಗಿ ಮಾಡಿಕೊಟ್ಟಿದೆ. ವರ್ಣನಪರ–ಕಥನಪರ ನಿಬಂಧಗಳ ಬಗೆಗೆ ದೃಶ್ಯಸೃಷ್ಟಿ ಕೆಲ ವಾದರೂ ವಸ್ತುಗಳನ್ನು ಒದಗಿಸಿ ಕೊಡುತ್ತಿತ್ತು. ಈ ಚಿಂತನಪರ ನಿಬಂಧಗಳೆಲ್ಲ ನಿಮ್ಮ ಕಲ್ಪನೆಯ ಕನಸುಗಳು, ಮತಿವಂತಿಕೆಯ ಮರಿಗಳು, ಸಾಹಿತ್ಯ ಸತ್ತ್ವದ ಶಿಶುಗಳು. ಭಾವ ನೆಯ ಬಾನಿನಲ್ಲಿ ಸಂಚರಿಸಿ ಸಾಕಾದಾಗ ವಿಶ್ರಾಂತಿಯ ಮಟ್ಟಿಗೆ ಭೂಮಿಯನ್ನು ಆಶ್ರಯಿಸ ಬಹುದು. ಅರ್ಥಾತ್, ವಿಷಯ ವಿಸ್ತರವನ್ನು ಕಲ್ಪನೆಯಿಂದ ಕಳೆಗಟ್ಟಿಸಬೇಕು; ಅದರ ಸಮರ್ಥನೆಗಾಗಿ ಸತ್ಯಸೃಷ್ಟಿಯಲ್ಲಿಯ ಉದಾಹರಣಗಳನ್ನು ಅಳವಡಿಸಿಕೊಳ್ಳಬೇಕು. ಇಂತಹ ಬರೆಹ ಸಂತತ ಪ್ರಯತ್ನದ ಫಲವಾಗಿಯೇ ಕೈಗೂಡುವುದೆಂಬುದನ್ನು ಬೇರೆ ಹೇಳಬೇಕಿಲ್ಲ.

## ಈ ಬಗೆಯ ಕೆಲವು ಮಾತುಗಳನ್ನು ನೆನಪಿಡಬೇಕು

ಚಿಂತನಪರ ನಿಬಂಧಗಳಲ್ಲಿ ವಿಚಾರಾತ್ಮಕ, ಗಾದೆಯ ಮಾತು, ಕಲ್ಪನಾವಿಲಾಸ, ವಿವಾ ದಾತ್ಮಕ ಮುಂತಾಗಿ ನಾಲ್ಕು ಬಗೆಯ ವಿಷಯಗಳು ಮುಖ್ಯ. ವಿಚಾರಾತ್ಮಕಗಳಲ್ಲಿ ಸಾಹಿತ್ಯ ಸಂಗ್ರಹವನ್ನೂ, ಗಾದೆಯ ಮಾತು–ವಾದ ವಿವಾದಗಳಲ್ಲಿ ಬುದ್ಧಿಯ ಬಲವನ್ನೂ, ಕಲ್ಪನಾ ವಿಲಾಸದಲ್ಲಿ ಕಲ್ಪನಾಚಾತುರ್ಯವನ್ನೂ ಹೆಚ್ಚಾಗಿ ಬಳಸಿಕೊಳ್ಳಬೇಕು.

## ಸಾಮಾನ್ಯ ನಿಬಂಧ ನಿರ್ದೇಶ

### ಆಲಸ್ಯ

**ಮುಖ್ಯ ಮಾತು:** ಆಲಸ್ಯ ಅಂತರಂಗದ ಶತ್ರು–ಎಂದರೇನು ? ಕೆಲಸವನ್ನು ತಪ್ಪಿಸಿ ವೇಳೆಯನ್ನು ವ್ಯರ್ಥವಾಗಿ ಕಳೆಯುವುದು– ಈ ದುರ್ಗಣದ ಹುಟ್ಟುಮೆಟ್ಟು– ಇದರಿಂದ ತನಗೆ ಆಗುವ ದೈಹಿಕ, ಮಾನಸಿಕ, ಆರ್ಥಿಕ ಹಾನಿ - ಸಮಾಜಕ್ಕೆ ಒದಗುವ ಸಂಕಟಗಳು– ಉದಾಹರಣಗಳು– ಮುಗಿತಾಯ.

### ಮಿದುಮಾತುಗಳು

ವಿಷಯಾರಂಭ— ಎಂದರೇನು ?— ಸಂಸಾರದ ಸೌಕರ್ಯಕ್ಕೆ ಹೆರವರ ಸಾಹಾಯ್ಯ ಮಿದುಮಾತಿನಿಂದಲೇ ಸಾಧ್ಯ— ಮಿದುಮಾತು ಹೆರವರ ಹೃದಯವನ್ನು ಆಕರ್ಷಿಸುವ ಸೂಜಿಗಲ್ಲು— ಲಾಭ— ಉದಾಹರಣಗಳು– ಮುಗಿತಾಯ.

## ಬೆಳ್ಳಗಿರುವುದೆಲ್ಲ ಬೆಳ್ಳಿಯಲ್ಲ

ಸಾಮಾನ್ಯಾರ್ಥ— ವಿಶೇಷಾರ್ಥ— ಈ ಗಾದೆ ಹುಟ್ಟಿದುದು ಹೇಗೆ— ಬೆಳ್ಳಗಿರುವುದೆಲ್ಲ ಬೆಳ್ಳಿಯೆಂಬ ಭ್ರಮೆ ಹೇಗೆ ಹುಟ್ಟುವುದು— ನಿಶ್ಚಿತಜ್ಞಾನ ಮಾಡಿಕೊಳ್ಳುವುದು ಹೇಗೆ ಮತ್ತು ಯಾಕೆ— ಭ್ರಮೆಯಿಂದಾದ ಹಾನಿಗಳು— ಸತ್ಯಜ್ಞಾನದಿಂದ ಲಾಭಗಳು— ಮುಗಿತಾಯ.

## ಐಕ್ಯದಲ್ಲಿಯೇ ಸೌಖ್ಯ

ಅರ್ಥವಿವರಣೆ: ಐಕ್ಯದ ಆವಶ್ಯಕತೆ — ಅದಕ್ಕೆ ಸಾಧನೆಗಳು— ಐಕ್ಯದ ಬಗೆಗೆ ಸೃಷ್ಟಿಯ ಸದುಪದೇಶ— ಉದಾಹರಣಗಳು— ಐಕ್ಯದಿಂದ ವ್ಯಕ್ತಿಗೂ ಸಮಾಜಕ್ಕೂ ರಾಷ್ಟ್ರಕ್ಕೂ ಹಿತ— ವಿರುದ್ಧ ಸ್ಥಿತಿಯಲ್ಲಾದ ಹಾನಿ— ಕೊನೆ.

## ನಾನು ಲಕ್ಷಾಧೀಶನಾದರೆ....?

ಲಕ್ಷಾಧೀಶನಾಗುವ ಸಾಧ್ಯಾಸಾಧ್ಯತೆ—ಸ್ವತಃದ ಸೌಖ್ಯವನ್ನು ಬೆಳೆಸಿಕೊಳ್ಳುವ ವಿಚಾರ— ಬಳಗದವರಿಗೆ ಬೆಂಬಲ— ಸಾರ್ವಜನಿಕ ಸಾಹಾಯ್ಯ— ಯಾವ ಯಾವ ಕಾರ್ಯಗಳು— ಮಾದರಿಗಾಗಿಟ್ಟುಕೊಳ್ಳುವ ಮಹಾಪುರುಷರು— ಮುಗಿತಾಯ.

## ನಾನು ಒಕ್ಕಲಿಗನಾಗಿದ್ದರೆ....?

ಒಕ್ಕಲಿಗನಾಗುವ ಆವಶ್ಯಕತೆ: ಪರಹಿತಸಾಧನೆಯ ಹಿರಿಯ ಹಾದಿಯದು, ಉತ್ತಮ ಖೇತೀ.... ಮುಂ— ಶಾಸ್ತ್ರೀಯ ಜ್ಞಾನಮಾಡಿಕೊಳ್ಳುವುದು— ಮೈಮುರಿದು ದುಡಿಯುವುದು— ಹೊಟ್ಟೆ-ಬಟ್ಟೆಗಳಿಗೆ ಅನುಕೂಲವಾಗುವ ಬೆಳೆಯನ್ನೇ ಬೆಳೆಯುವುದು— ದುಡಿದುದು ಸರ್ವರಿಗೂ ಮುಟ್ಟುವಂತೆ ಸರಕಾರಕ್ಕೆ ಕೊಡುವುದು ಇಲ್ಲವೆ ಪೇಟೆಯಲ್ಲಿ ಮಾರುವುದು— ಮುಗಿತಾಯ.

## ಕತ್ತಿಯೋ ಲೆಕ್ಕಣಿಕೆಯೋ ?

ಕತ್ತಿಯ ಉಪಯೋಗ: ಕಾಡು ಜೀವನದಲ್ಲಿ— ಇಂದಿನ ಜಗತ್ತಿನ ಸಂಸ್ಕೃತಿಗೆ ಲೆಕ್ಕಣಿಕೆಯ ಆಧಾರ— ಕತ್ತಿಯ ಮೇಲೆಯೂ ಲೆಕ್ಕಣಿಕೆಯ ಪ್ರಭಾವ— ಕತ್ತಿ ವಿಧ್ವಂಸಕ ಅಸ್ತ್ರ— ಲೆಕ್ಕಣಿಕೆಯು ವಿಧಾಯಕ ಅಸ್ತ್ರ— ಮುಗಿತಾಯ.

## ಜ್ಞಾನವೋ ಧನವೋ ?

ಶಾಬ್ದಿಕ ವಿವರಣ:— ಬಾಳಿನ ಆವಶ್ಯಕತೆಗಳ ಪೂರೈಕೆಗೆ ಕಾರಣವಾವುದು — ಜ್ಞಾನದಿಂದ ಧನವೋ ಧನದಿಂದ ಜ್ಞಾನವೋ ?— ಜ್ಞಾನ, ಧನಗಳ ಕಾರ್ಯಕ್ಷೇತ್ರವಿಸ್ತಾರ— ಯಾವುದು ಮಿಗಿಲು, ಏಕೆ— ಮುಗಿತಾಯ.

## ಕರ್ನಾಟಕ ಏಕೀಕರಣ

ಮುಮ್ಮಾತು:— ಕರ್ನಾಟಕ ಏಕೀಕರಣವೆಂದರೇನು ?— ಹರಿದು ಹಂಚಿದ ಕಾರಣವೇನು ?— ಪ್ರಾಚೀನ ಕನ್ನಡ ನಾಡಿನ ರೂಪರೇಖೆ— ಇಂದಿನ ತುಂಡುತುಂಡುಗಳು—

ಒಂದುಗೂಡಿಸುವ ಆವಶ್ಯಕತೆ— ಪಟ್ಟ ಪ್ರಯತ್ನಗಳು— ಏಕೀಕರಣದಿಂದಾಗುವ ಲ ಗಳು— ಏಕೀಕರಣಕ್ಕೆ ಕರ್ನಾಟಕದ ಸಮರ್ಥತೆ— ಏಕೀಕರಣದ ಅಂಗಗಳಾವುವು ?— ಅವುಗಳನ್ನು ಹೊಂದುಗೂಡಿಸುವುದು ಹೇಗೆ ?— ಕೈಗೂಡಿಸಿಕೊಳ್ಳುವ ಉಪಾಯಗಳು— ಮುಗಿತಾಯ.

## — ಬಳಕೆ ಮತ್ತು ಕೇಳಿಕೆ —

೧. ಕೆಳಗಿನ ವಿಷಯಗಳನ್ನು ಕುರಿತು ನಿಬಂಧಗಳನ್ನು ಬರೆಯಿರಿ.

ನಮ್ಮ ಊರು, ಮಳೆಗಾಲದ ಒಂದು ದಿನ, ಪಾಡುನೇತಾಡುತ್ತಿದ್ದ ಮಾವಿನ ಮ. ಮಂಜಿನ ಹನಿಯ ಆತ್ಮವೃತ್ತ, ಜಾತ್ರೆಯಲ್ಲಿ ತೊಟ್ಟಿಲ ಜೀಕ, ನನ್ನ ಆದರ್ಶ ಮ. ಪುರುಷ, ನನ್ನ ಪ್ರೀತಿಯ ಆಟ, ಕಲ್ಲಿದ್ದಲಿಯ ಆತ್ಮವೃತ್ತ, ಸರ ಜಗದೀಶಚಂದ್ರ ಬೋಸ, ಸರ್. ಎಸ್. ರಾಧಾಕೃಷ್ಣನ್, ನಾನು ಕೋಗಿಲೆಯಾಗಿದ್ದರೆ, ರೇಡಿಯೋ ಕೇಂದ್ರಗಳಿಂದಾಗುವ ಲಾಭಗಳು, ಐತಿಹಾಸಿಕ ಸ್ಥಳ ಸಂದರ್ಶನ, ಮತಗಟ್ಟೆ. ಮುಂಗಡೆಯಲ್ಲಿ— ಸಮಯ ನಿಷ್ಠೆ, ವಿಮಾನವನ್ನು ಮೊತ್ತಮೊದಲು ನೋಡಿದಾ. ಕಾಜಿನ ಕಾರಖಾನೆ, ನಾನು ಮೆಚ್ಚಿದ ಪುಸ್ತಕ, ತಿಳ್ಳಿಯ ಆಟ, ಬಟ್ಟೆಯ ಬೆಡ. ನಾವು ನಮ್ಮ ಹಿರಿಯರಿಗಿಂತ ಸುಖಿಗಳೋ, ಚಕ್ಕಡಿ ಮತ್ತು ರೈಲು ಪ್ರಯಾ. ಇಷ್ಟಾನಿಷ್ಟಗಳು, ನದೀ ವಿಹಾರ, ಅಲ್ಲೀಕೇರಿಯ ಊಟ, ಜಿಟ್ಟೆಹುಳು, ಕುಡುಕುತನ. ಕೆಡಕುಗಳು, ಮುರಿದ ಮೂರ್ತಿಯ ಆತ್ಮವೃತ್ತ.

೨. ಚಿಂತನಪರ ನಿಬಂಧಗಳೆಂದರೇನು ? ಅವುಗಳಲ್ಲಿ ಎಷ್ಟು ಬಗೆ ?

೩. ಈ ನಿಬಂಧಗಳನ್ನು ಬರೆಯುವ ಬಗೆಗೆ ಸಾಮಾನ್ಯ ವಿಶೇಷ ನಿಯಮಗಳಾವುವು ?

೪. ವಿಷಯಾಂತರ ದೋಷವೆಂದರೇನು ? ಉದಾಹರಿಸಿರಿ.

೫. ಉತ್ತಮ ನಿಬಂಧಗಳನ್ನು ಹೇಗೆ ಬರೆಯಬೇಕು ?

:: ಜಯ ಹಿಂದ – ಒಂದೇ ಕರ್ನಾಟಕಮ್ ::